


ಅಧ್ಯಯನಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – 583276


2014–15ನೆಯ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# "ಕುವೆಂಪು ಅವರ ಮಕ್ಕಳ ಸಾಹಿತ್ಯ"


ನಿಬಂಧಕಾರರು
ನೋಂದಣಿ ಸಂಖ್ಯೆ : KVTM/K 140901030089
ಕನ್ನಡ ಎಂ.ಫಿಲ್ ವಿದ್ಯಾರ್ಥಿ




2014–15



ಅಧ್ಯಯನಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – 583276

2014–15ನೆಯ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# "ಕುವೆಂಪು ಅವರ ಮಕ್ಕಳ ಸಾಹಿತ್ಯ"

ಸಂಶೋಧಕರು - ನೇತ್ರಾವತಿ.ಬಿ.
ಮಾರ್ಗದರ್ಶಕರು - ಡಾ. ಎಚ್ ಗೀತಾ.

ನಿಬಂಧಕಾರರು

ನೋಂದಣಿ ಸಂಖ್ಯೆ : KVTM/K 140901030089

ಕನ್ನಡ ಎಂ.ಫಿಲ್ ವಿದ್ಯಾರ್ಥಿ

2014–15

1227

## ಪರಿವಿಡಿ

# "ಕುವೆಂಪು ಅವರ ಮಕ್ಕಳ ಸಾಹಿತ್ಯ"



* * * * *

# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

**ಕು**ವೆಂಪು ಎಂಬ ಕಾವ್ಯನಾಮದಿಂದ ಪ್ರಖ್ಯಾತಿಯನ್ನು ಪಡೆದಿರುವ ಪದ್ಮಭೂಷಣ ಡಾಕ್ಟರ್ ಕೆ.ವಿ.ಪುಟ್ಟಪ್ಪನವರು ಇಪ್ಪತ್ತನೇ ಶತಮಾನದಲ್ಲಿ ಕನ್ನಡ ಸಾಹಿತ್ಯವು ಕಂಡಂತಹ ಶ್ರೇಷ್ಠ ಕವಿ. ಅವರ ಸಾಹಿತ್ಯ ಸೃಷ್ಟಿ ವೈವಿಧ್ಯಮಯವಾದುದು ಹಾಗೂ ಸಮೃದ್ಧವಾದುದು. ಆದ್ದರಿಂದಲೇ ಇಪ್ಪತ್ತನೇ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆಯು ಕುವೆಂಪುರವರ ಸಾಹಿತ್ಯ ಬೆಳವಣಿಗೆಯ ಸಾಧನೆಗಳಿಂದ ಮತ್ತು ಅವರು ಇತರ ಕವಿಗಳ ಮೇಲೆ ಬೀರಿದ ಪ್ರಭಾವದಿಂದ ಕಂಗೊಳಿಸುತ್ತಿದೆ.

ಕುವೆಂಪುರವರು ಕನ್ನಡ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿಯೂ ಸತ್ವಪೂರ್ಣವಾದ ಕೃತಿಗಳನ್ನು ರಚಿಸಿದ್ದಾರೆ. "ಕಾವ್ಯ, ನಾಟಕ, ಕಾದಂಬರಿ, ಸಣ್ಣಕಥೆ, ಲಲಿತ ಪ್ರಬಂಧ, ಜೀವನಚರಿತ್ರೆ, ಆತ್ಮಕಥೆ, ಕಾವ್ಯಮೀಮಾಂಸೆ, ಮಕ್ಕಳ ಸಾಹಿತ್ಯ, ವಿಚಾರಸಾಹಿತ್ಯ, ಸಾಹಿತ್ಯವಿಮರ್ಶೆ" ಹೀಗೆ ಸುಮಾರು ಎಪ್ಪತ್ತಕ್ಕೂ ಹೆಚ್ಚು ಕೃತಿಗಳನ್ನು ನಿರ್ಮಿಸಿ ಹೊಸಗನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ.

ಕುವೆಂಪು ಸಾಹಿತ್ಯದ ಮುಖ್ಯ ಲಕ್ಷಣಗಳೆಂದರೆ ಅದಮ್ಯವಾದ ನಿಸರ್ಗ ಪ್ರೇಮ, ಅಧ್ಯಾತ್ಮ ಮತ್ತು ವೈಚಾರಿಕತೆ ಅಷ್ಟೇ ಅಲ್ಲದೆ ಮಾನವೀಯ ಮೌಲ್ಯಗಳ ಶೋಧನೆಯ ನೆಲೆಯನ್ನು ಅವರ ಸಾಹಿತ್ಯ ಒಳಗೊಂಡಿದೆ. ಇವರ ಬದುಕು, ಬರಹ, ಸಾಮಾಜಿಕ, ಸಾಂಸ್ಕೃತಿಕ ಕಾಳಜಿ ಇವುಗಳೆಲ್ಲ ಮಹತ್ವಪೂರ್ಣವಾದವುಗಳಾಗಿವೆ. ಈ ಎಲ್ಲಾ ದೃಷ್ಟಿಯಿಂದ ಕುವೆಂಪು ಅವರ ಸಾಹಿತ್ಯವನ್ನು ಅಧ್ಯಯನ ಮಾಡುವುದರಿಂದ ಹೊಸ ಚಿಂತನೆಯನ್ನು ಬೆಳೆಸಿಕೊಳ್ಳಬಹುದಾಗಿದೆ.

ಕುವೆಂಪು ಅವರ ಸಾಹಿತ್ಯ ಸೃಷ್ಟಿ ಮೌಲಿಕವಾದದ್ದಾಗಿದೆ. ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ಅವರು ಸಿದ್ಧಿಯನ್ನು ಪಡೆದಿದ್ದಾರೆ. ಏಕೆಂದರೆ ಅವರ ಸಾಹಿತ್ಯವು ಮಕ್ಕಳ ಸಾಹಿತ್ಯದಿಂದ ಹಿಡಿದು ಮಹಾಕಾವ್ಯದವರೆಗೂ ಉಂಟು. ಇಷ್ಟೊಂದು ವೈವಿಧ್ಯ, ಸಮೃದ್ಧಿಗಳನ್ನುಳ್ಳ ಸಾಹಿತ್ಯವನ್ನು ಕೊಟ್ಟ ಬರಹಗಾರರು ಇತರ ಬೇರೆ ಭಾಷೆಯಲ್ಲಿ ವಿರಳವೆಂದೇ ಹೇಳಬಹುದು.

ಕುವೆಂಪು ಅವರ ದೃಷ್ಟಿ ಮಹತ್ತಿನತ್ತ ಹಾಗೂ ಬೃಹತ್ತಿನತ್ತಲೇ ಮೊದಲಿನಿಂದಲೂ ಕೇಂದ್ರೀಕೃತವಾಗಿರುವುದನ್ನು ಕಾಣಬಹುದು. ಮಹಾಕಾವ್ಯ, ಬೃಹತ್ತಾದ ಕಾದಂಬರಿಗಳು,

ಭಾವಗೀತೆಗಳನ್ನು ರಚಿಸಿದ್ದಾರೆ. ಆಧುನಿಕ ಕನ್ನಡ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿಯೂ ಸತ್ವಪೂರ್ಣವಾದ, ಮೌಲ್ಯಯುತವಾದ ಕೃತಿಗಳನ್ನು ರಚಿಸಿದ್ದಾರೆ.

"ಶ್ರೀ ರಾಮಾಯಣ ದರ್ಶನಂ" ಕುವೆಂಪು ಅವರ ಮಹಾಕಾವ್ಯ. ಇದರಲ್ಲಿನ ಪ್ರತಿಯೊಂದು ಪಾತ್ರಗಳು ಜೀವತುಂಬಿಕೊಂಡಿದೆ. 'ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿ' ಈ ಮೂರು ಅಂಶಗಳು ತಮ್ಮ ಕಣ್ಣುಗಳಿದ್ದ ಹಾಗೆ ಎಂದು ಕುವೆಂಪುರವರೆ ಸ್ವತಃ ಹೇಳಿಕೊಂಡಿದ್ದಾರೆ.

ವಚನಕಾರರನ್ನು ಬಿಟ್ಟರೆ ಕುವೆಂಪು ಅವರೇ ಕನ್ನಡದ ಮೊದಲ ಸಾಮಾಜಿಕ ಕವಿ ಎಂದು ಹೇಳಬಹುದು. ಇವರ ಸಾಹಿತ್ಯ ಪ್ರಪಂಚಕ್ಕೆ ಒಳಗಾಗದ ವಸ್ತುವೇ ಇಲ್ಲ.

'ಆಡು ಮುಟ್ಟದ ಸೊಪ್ಪಿಲ್ಲ' ಎಂಬ ಗಾದೆಯ ಮಾತಿನಂತೆ 'ಕುವೆಂಪು ಕೈಹಾಕದ ಸಾಹಿತ್ಯ ಪ್ರಕಾರವಿಲ್ಲ' ಎಂದು ಹೇಳಿದರೆ ತಪ್ಪಾಗಲಾರದು. ಏಕೆಂದರೆ, 'ಅಮಲನ ಕಥೆ' ಎಂಬ ಕೃತಿಯಿಂದ ಹಿಡಿದು 'ಶ್ರೀ ರಾಮಾಯಣ ದರ್ಶನಂ' ಎಂಬ ಮಹಾಕಾವ್ಯದವರೆಗೂ ಸಾಧನೆ ಮಾಡಿರುವ ಕುವೆಂಪುರವರು ರಾಷ್ಟ್ರಕವಿ ಆಗಿದ್ದರೂ ಕೂಡ ಮಕ್ಕಳ ಸಾಹಿತ್ಯವನ್ನು ಮಾತ್ರ ಕಡೆಗಣಿಸಿಲ್ಲ.

'ಮಕ್ಕಳ ಸಾಹಿತ್ಯ' ಅದರ ಹೆಸರೇ ಸೂಚಿಸುವಂತೆ ಇದು ಮಕ್ಕಳಿಗಾಗಿಯೇ ರಚಿತವಾಗಿರುವಂತಹ ಸಾಹಿತ್ಯವಾಗಿದೆ. ಆದರೆ ಕುವೆಂಪುರವರ ಮಕ್ಕಳ ಸಾಹಿತ್ಯವು ಕೇವಲ ಮಕ್ಕಳಿಗೆ ಮಾತ್ರವಲ್ಲದೆ ಹಿರಿಯರಿಗೂ ಕೂಡ ಆಸಕ್ತಿಯನ್ನು ಹುಟ್ಟಿಸುತ್ತದೆ. ಇದಕ್ಕೆ ಪೂರಕವಾಗಿ ಕುವೆಂಪುರವರ 'ಬೊಮ್ಮನಹಳ್ಳಿಯ ಕಿಂದರಿ ಜೋಗಿ' ಒಂದು ಸೂಕ್ತ ಉದಾಹರಣೆಯಾಗಿದೆ.

'ಮಕ್ಕಳ ಸಾಹಿತ್ಯ' ಎಂದ ತಕ್ಷಣ ಅದರ ರಚನೆ ಅಷ್ಟು ಸುಲಭವೇನಲ್ಲ. ಏಕೆಂದರೆ ರಚನೆ ಮಾಡುವಂತಹ ಸಾಹಿತ್ಯವು ಮೃದುತ್ವದಿಂದ ಕೂಡಿರುವ ಮಕ್ಕಳ ಮನಸ್ಸಿಗೆ ಅರ್ಥವಾಗುವಂತಿರಬೇಕು. ಇದರಲ್ಲಿ ತಂತ್ರಗಾರಿಕೆ ಅತೀ ಅವಶ್ಯಕ ಎನ್ನಬಹುದು. ಅಷ್ಟೇ ಅಲ್ಲದೆ ಇಂತಹ ಸಾಹಿತ್ಯವನ್ನು ಇತರರು ರಚಿಸಲು ಸಾಧ್ಯವಾಗದ ಮಾತಾಗಿದೆ. ಯಾರು ಮಕ್ಕಳ ಮನಸ್ಸನ್ನು ಅರಿತಿರುತ್ತಾರೊ ಅಂತಹವರು ಮಾತ್ರ ಈ ಸಾಹಿತ್ಯವನ್ನು ರಚಿಸಲು ಸಾಧ್ಯ.

ಮುಖ್ಯವಾಗಿ ಮಕ್ಕಳಿಗೆ ಅರ್ಥವಾಗುವ ಸರಳವಾದ ಭಾಷೆ. ಆಸಕ್ತಿಯಿರುವ ವಿಷಯಗಳ ಬಗ್ಗೆ ಮೊದಲು ತಿಳಿದು ನಂತರ ಸಾಹಿತ್ಯವನ್ನು ರಚಿಸಬೇಕಾಗುತ್ತದೆ. ಹೀಗಾಗಿ,

ಮಕ್ಕಳ ಸಾಹಿತ್ಯ ತನ್ನದೇ ಆದ ಒಂದು ವಿಶಿಷ್ಟ ಬೆಲೆ–ನೆಲೆಯನ್ನು ಹೊಂದಿದ್ದು ಪ್ರತಿಯೊಬ್ಬರಿಗೂ ಅತ್ಯಂತ ಪ್ರಿಯವಾದ ಒಂದು ಸಾಹಿತ್ಯವಾಗಿದೆ.

ಕುವೆಂಪುರವರ ಮಕ್ಕಳ ಸಾಹಿತ್ಯದಲ್ಲಿನ ಕಥೆ, ನಾಟಕ, ಕವನಗಳು ಒಂದೊಂದು ಒಂದು ರೀತಿಯಾದ ನೀತಿಯನ್ನು ಹೇಳುವಂತದ್ದಾಗಿರುತ್ತದೆ. ಈ ಎಲ್ಲಾ ಕಾರಣಗಳಿಂದ ಮಕ್ಕಳ ಸಾಹಿತ್ಯ ಹಿರಿಯರಿಗೆ, ಕಿರಿಯರಿಗೆ ಅತ್ಯಂತ ಪ್ರಿಯವಾದ ಸಾಹಿತ್ಯ ಪ್ರಕಾರವಾಗಿದೆ.

ಪ್ರಸ್ತುತ ಕುವೆಂಪುರವರ ಮಕ್ಕಳ ಸಾಹಿತ್ಯವನ್ನು ಕುರಿತು ಬರೆಯುವ ಸಂದರ್ಭದಲ್ಲಿಯೇ ಅವರ ಸಾಹಿತ್ಯ ದರ್ಶನ, ವ್ಯಕ್ತಿತ್ವ ಪರಿಚಯ, ಮಕ್ಕಳ ಸಾಹಿತ್ಯದಲ್ಲಿ ಕಂಡುಬರುವ ಮನುಷ್ಯ ಮತ್ತು ಪ್ರಕೃತಿಯ ನಡುವಿನ ಸಂಬಂಧ ಸಾಹಿತ್ಯದ ಮೂಲಕ ಮಕ್ಕಳಿಗೆ ತಿಳಿಸುವಂತಹ ಮಾನವೀಯ ಮೌಲ್ಯಗಳು ಹಾಗೂ ಮಕ್ಕಳ ಸಾಹಿತ್ಯಕ್ಕೆ ಕುವೆಂಪುರವರ ಪ್ರಭಾವದ ಬಗೆ. ಹೀಗೆ ಇನ್ನೂ ಹಲವು ಅಂಶಗಳನ್ನು ತಿಳಿಸುವುದು ಈ ನಿಬಂಧದ ಉದ್ದೇಶವಾಗಿದೆ.

ಈ ಮೇಲಿನ ಉದ್ದೇಶಗಳನ್ನು ಒಳಗೊಂಡಂತೆಯೇ ಈ ಅಧ್ಯಯನವನ್ನು ಒಟ್ಟು ಆರು ಅಧ್ಯಾಯಗಳನ್ನಾಗಿ ವಿಭಾಗ ಮಾಡಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಮೊದಲು ಕುವೆಂಪುರವರ ಕಿರುಪರಿಚಯದೊಂದಿಗೆ ಅವರ ವ್ಯಕ್ತಿತ್ವ ಅವರು ಕನ್ನಡ ಸಾಹಿತ್ಯಕ್ಕೆ ನೀಡಿರುವಂತಹ ಕೊಡುಗೆ, ಅವರ ಸಾಹಿತ್ಯದ ಲಕ್ಷಣಗಳನ್ನು ತಿಳಿಯುವುದರ ಜೊತೆಗೆ ಕುವೆಂಪುರವರು ಇತರ ಸಾಹಿತ್ಯಗಳಂತೆ ಮಕ್ಕಳ ಸಾಹಿತ್ಯಕ್ಕೆ ನೀಡಿರುವಂತಹ ಪ್ರಾಮುಖ್ಯತೆಯನ್ನು ತಿಳಿಯಬಹುದಾಗಿದೆ.

ಎರಡನೇ ಅಧ್ಯಾಯದಲ್ಲಿ ಮಕ್ಕಳ ಸಾಹಿತ್ಯದ ರಚನೆಯ ಬಗ್ಗೆ, ಇಂತಹ ಸಾಹಿತ್ಯದ ಬೆಳವಣಿಗೆಗೆ ಕಾರಣರಾದ ರಚನೆಕಾರರ ಪರಿಚಯವನ್ನು ಮಾಡಲಾಗುತ್ತದೆ. ಮುಖ್ಯವಾಗಿ ಮಕ್ಕಳ ಸಾಹಿತ್ಯದ ಲಕ್ಷಣಗಳು, ಅದರ ವಿಧಗಳು ಹಾಗೂ ಪ್ರಕಾರಗಳನ್ನು ತಿಳಿಸಲಾಗುತ್ತದೆ. ಇಂತಹ ಮಕ್ಕಳ ಸಾಹಿತ್ಯದ ಬಗ್ಗೆ ಅನೇಕರ ಅಭಿಪ್ರಾಯವನ್ನು ಕಲೆ ಹಾಕುವುದು. ಅದರ ಜೊತೆಯಲ್ಲೇ ಕುವೆಂಪುರವರ ಮಕ್ಕಳ ಸಾಹಿತ್ಯ ಪ್ರಕಾರಗಳಾದ ಕಥೆ, ಕವನ, ನಾಟಕಗಳಲ್ಲಿ ಬರುವ ಒಟ್ಟು ಸಾರಾಂಶವನ್ನು ಪರಿಚಯಿಸುವುದು. ಈ ಸಾಹಿತ್ಯದಲ್ಲಿ ಬರುವಂತಹ ನೀತಿಯನ್ನು, ಅಗತ್ಯವಾಗಿರುವ ಅಂಶಗಳನ್ನು ಮಕ್ಕಳಿಗೆ ಅಳವಡಿಸಲು ಕುವೆಂಪುರವರು ಮಾಡಿರುವ ಪ್ರಯತ್ನವನ್ನು ಕಾಣಬಹುದಾಗಿವೆ.

ಮೂರನೇ ಅಧ್ಯಾಯದಲ್ಲಿ ಕುವೆಂಪುರವರ ಮಕ್ಕಳ ಸಾಹಿತ್ಯದಲ್ಲಿ ಕಂಡುಬರುವ ಮಾನವೀಯ ಮೌಲ್ಯಗಳನ್ನು ಅವಲೋಕಿಸುವುದು. ಅವರ ಸಾಹಿತ್ಯ ಪ್ರಕಾರಗಳಾದ ಕಥೆ, ಕವನ, ನಾಟಕಗಳಲ್ಲಿ ಬರುವಂತಹ ಮಾನವೀಯ ಗುಣಗಳಾದ 'ಪ್ರೀತಿ, ಪ್ರೇಮ, ವಾತ್ಸಲ್ಯ, ಕರುಣೆ, ಔದಾರ್ಯತೆ, ಭಕ್ತಿ, ಶ್ರದ್ಧೆ, ಕ್ಷಮಾಗುಣ'ಗಳನ್ನು ಮಕ್ಕಳಲ್ಲಿ ಬೆಳೆಸಲು ಮುಂದಾಗಿರುವುದು. ಇದರ ಜೊತೆಯಲ್ಲಿ ಮಕ್ಕಳಿಗೆ ಕವನಗಳ ಮೂಲಕ ಭಾಷಾಭಿಮಾನ, ದೇಶಾಭಿಮಾನವನ್ನು ಪ್ರಚೋದಿಸುವುದು. ಇಂತಹ ಸಾಹಿತ್ಯದಿಂದ ಮಕ್ಕಳ ಬೆಳವಣಿಗೆಯಲ್ಲಿ ಆಗುವ ಪರಿಣಾಮವನ್ನು ತಿಳಿಸಲಾಗುತ್ತದೆ.

ನಾಲ್ಕನೇ ಅಧ್ಯಾಯದಲ್ಲಿ ಕುವೆಂಪುರವರಿಗಿರುವ ನಿಸರ್ಗ ಪ್ರೇಮ ಮಕ್ಕಳ ಸಾಹಿತ್ಯದ ಮೂಲಕ ಮಕ್ಕಳಿಗೆ ಇಷ್ಟವಾಗುವ, ಆಸಕ್ತಿ ತೋರುವ ಕಥೆ, ಕವನ, ನಾಟಕಗಳ ಪ್ರಕಾರವಾಗಿ ಅವರಲ್ಲಿ ಪ್ರಕೃತಿಯ ಬಗ್ಗೆ ಆಸಕ್ತಿ ಮೂಡಿಸುವುದು, ಅದರ ಬಗ್ಗೆ ಕಾಳಜಿ ವಹಿಸುವುದರ ಜೊತೆಗೆ ಪ್ರಕೃತಿ – ಮನುಷ್ಯನಿಗಿರುವ ಸಂಬಂಧವನ್ನು ಈ ಮೂಲಕ ಪರಿಚಯಿಸಲಾಗುವುದು. ಈ ಅಧ್ಯಾಯದಲ್ಲಿ ಮುಖ್ಯವಾಗಿ ಕುವೆಂಪುರವರಿಗಿರುವ ನಿಸರ್ಗ ಪ್ರೀತಿಯ ಬಗ್ಗೆ ತಿಳಿದುಕೊಳ್ಳಬಹುದಾಗಿದೆ.

ಐದನೇ ಅಧ್ಯಾಯದಲ್ಲಿ ಕುವೆಂಪುರವರು ಮಕ್ಕಳಿಗೆ ಅರ್ಥವಾಗುವ ರೀತಿಯಲ್ಲಿ ಸರಳವಾದ ಭಾಷೆಯನ್ನು ಬಳಸಿ ಮಕ್ಕಳ ಸಾಹಿತ್ಯವನ್ನು ಪರಿಚಯಿಸಲು ಮುಂದಾಗಿದ್ದಾರೆ ಎಂಬ ಅಂಶದ ಜೊತೆಗೆ ಮಕ್ಕಳಿಗೆ ಅರ್ಥವಾಗದೆ ಇರುವಂತಹ ಪದಗಳನ್ನು ಆಡುಭಾಷೆಯ ಮೂಲಕ ಪರಿಚಯಿಸಲಾಗುವುದನ್ನು ಕಾಣಲಾಗುತ್ತದೆ.

ಆರನೇ ಅಧ್ಯಾಯವು ಕೊನೆಯ ಅಧ್ಯಾಯವಾಗಿದ್ದು ಇದರಲ್ಲಿ ಒಟ್ಟಾರೆಯಾಗಿ ಕುವೆಂಪುರವರ ಮಕ್ಕಳ ಸಾಹಿತ್ಯದ ಬಗ್ಗೆ, ಆ ಸಾಹಿತ್ಯದಲ್ಲಿ ಬರುವಂತಹ ಮಾನವೀಯ ಮೌಲ್ಯಗಳನ್ನು ಮಕ್ಕಳು ಅಳವಡಿಸಿಕೊಳ್ಳುವುದರ ಬಗ್ಗೆ ಹಾಗೂ ಕುವೆಂಪುಗಿರುವ ನಿಸರ್ಗ ಪ್ರೇಮ, ಅದರ ಬಗ್ಗೆ ಅವರಿಗಿರುವ ಪ್ರೀತಿ, ಕಾಳಜಿಯನ್ನು ಬೆಳೆಯುತ್ತಿರುವ ಮಕ್ಕಳಿಗೆ ತಮ್ಮ ಸಾಹಿತ್ಯದ ಮೂಲಕ ಅವರಲ್ಲೂ ಪ್ರಕೃತಿ ಪ್ರೇಮವನ್ನು ಉಂಟುಮಾಡಲು ಮುಂದಾಗಿರುವುದನ್ನು ಕಾಣಬಹುದು. ಇದಷ್ಟೇ ಅಲ್ಲದೆ ಮಕ್ಕಳ ಸಾಹಿತ್ಯ ಕುಂಠಿತವಾಗುವುದಕ್ಕೆ ಕಾರಣ. ಅದನ್ನು ಪ್ರೋತ್ಸಾಹಿಸಲು ವಹಿಸಬೇಕಾದ ಕ್ರಮಗಳನ್ನು ತಿಳಿಸಲಾಗುವುದು.

ಹೀಗೆ ಮಕ್ಕಳ ಸಾಹಿತ್ಯ ಎಂಬುದು ಕೇವಲ ಸಾಹಿತ್ಯವಾಗಿ ಉಳಿಯದೆ ಬೆಳೆಯುವ ಪ್ರತಿಯೊಂದು ಮಗುವಿಗೂ ಈ ಸಾಹಿತ್ಯವೇ ಪ್ರತಿಯೊಂದು ಹೆಜ್ಜೆಯ ತಳಪಾಯವಾಗಬೇಕು ಎಂಬ ಆಶಯದ ಮೂಲಕ ಕುವೆಂಪುರವರ ಮಕ್ಕಳ ಸಾಹಿತ್ಯವು ಇಂದಿಗೂ ನಮ್ಮ ಸಮಾಜಕ್ಕೆ

ಮುಖ್ಯವಾದ ಕೊಡುಗೆ ಆಗಿದೆ ಎಂದು ಹೇಳಬಹುದು.

ಕುವೆಂಪುರವರ ಸಾಹಿತ್ಯ ಪ್ರಕಾರಗಳಲ್ಲಿ ಒಂದಾದ ಮಕ್ಕಳ ಸಾಹಿತ್ಯವನ್ನು ಅವಲೋಕಿಸುವುದಾದರೆ 'ಅಮಲನ ಕಥೆ, ಹಾಳೂರು, ಬೊಮ್ಮನ ಹಳ್ಳಿಯ ಕಿಂದರಿಜೋಗಿ, ನನ್ನ ಮನೆ, ಮೇಘಪುರ, ಮರಿವಿಜ್ಞಾನಿ, ಮೋಡಣ್ಣನ ತಮ್ಮ, ನನ್ನ ಗೋಪಾಲ, ನರಿಗಳಿಗೇಕೆ ಕೋಡಿಲ್ಲ' – ಹೀಗೆ ಕಥೆ, ಕವನ, ನಾಟಕಗಳನ್ನು ಕುವೆಂಪುರವರ ಮಕ್ಕಳ ಸಾಹಿತ್ಯ ಒಳಗೊಂಡಿದ್ದು ಇಂತಹ ಸಾಹಿತ್ಯವನ್ನು ಅಧ್ಯಯನ ಮಾಡುವುದಾಗಿದೆ.

ಈ ಎಲ್ಲಾ ದೃಷ್ಟಿಯಿಂದ ಮಕ್ಕಳ ಸಾಹಿತ್ಯದ ಮೂಲಕ ಕನ್ನಡ ಸಾಹಿತ್ಯಕ್ಕೆ ಕುವೆಂಪು ಅವರ ಕೊಡುಗೆ ಯಾವ ರೀತಿ ಬಂದಿದೆ ಎಂಬುದನ್ನು ತಿಳಿಸುವುದೇ ಈ ನಿಬಂಧದ ಮುಖ್ಯ ಉದ್ದೇಶವಾಗಿದೆ.

## ಅಧ್ಯಾಯ ಎರಡು

# ಕನ್ನಡದಲ್ಲಿ ಮಕ್ಕಳ ಸಾಹಿತ್ಯ

ಮಕ್ಕಳ ಸಾಹಿತ್ಯ ಎಂಬುದು ಇತ್ತೀಚೆಗೆ ಬಂದದ್ದಲ್ಲ. ಏಕೆಂದರೆ ಪ್ರತಿಯೊಂದು ಮನೆಗಳಲ್ಲೂ ತಂದೆ-ತಾಯಿಗಳು, ಅಜ್ಜ-ಅಜ್ಜಿಯಂದಿರು, ತಮ್ಮ ಮಕ್ಕಳಿಗೆ ಊಟ ಮಾಡಿಸುವಾಗ, ರಾತ್ರಿ ಮಲಗಿಸುವ ಸಂದರ್ಭದಲ್ಲಿ ಲಾಲಿ ಹಾಡು, ಕಥೆಗಳನ್ನು ಹೇಳುವ ಮೂಲಕ ಮಕ್ಕಳ ಸಾಹಿತ್ಯಕ್ಕೆ ತಮ್ಮದೇ ಆದಂತಹ ಕೊಡುಗೆಗಳನ್ನು ನೀಡುತ್ತ ಬಂದಿದ್ದಾರೆ.

ಕಥೆಗಳ ಸಾಲಿಗೆ ಸೇರುವ ಕಾಗಕ್ಕ-ಗುಬ್ಬಕ್ಕನ ಕಥೆ, ರಾಜಕುಮಾರ-ರಾಜಕುಮಾರಿ ಕಥೆಗಳನ್ನು ಮಕ್ಕಳಿಗೆ ಹೇಳಿಕೊಂಡೇ ಬಂದಿದ್ದೇವೆ. ಹಾಗಾಗಿ, ಇಂತಹವುಗಳೆಲ್ಲ ಮಕ್ಕಳ ಸಾಹಿತ್ಯಕ್ಕೆ ಒಳಪಟ್ಟಿದೆ.

ಮಕ್ಕಳ ಸಾಹಿತ್ಯ ಎಂದ ತಕ್ಷಣ ಎಲ್ಲರಿಗೂ ಮೊದಲು ನೆನಪಾಗುವುದು 'ಪಂಚತಂತ್ರದ ಕಥೆಗಳು : ಏಕೆಂದರೆ ನಾವೆಲ್ಲರೂ ಇಂತಹ ಕಥೆಗಳನ್ನೇ ಕೇಳಿ ಬೆಳೆದಂತಹವರು. ಆದ್ದರಿಂದಲೇ ಪಂಚತಂತ್ರದ ಕಥೆಗಳನ್ನು ಮಕ್ಕಳ ಸಾಹಿತ್ಯದ ಮೂಲ ಆಕರವೆಂದೇ ಕರೆಯಬಹುದು.

ಈ ಸಾಹಿತ್ಯವು ಪ್ರತಿಯೊಬ್ಬರ ಜೀವನದಲ್ಲಿ ಬರುವಂತಹ ಸಮಸ್ಯೆಯನ್ನು, ಯಾವುದೇ ಕಷ್ಟಗಳಿಂದ ಉಂಟಾದ ಬೇಸರವನ್ನು ದೂರಮಾಡಿ ಆನಂದವನ್ನು ಉಂಟುಮಾಡುವ ಶಕ್ತಿಯನ್ನು ಒಳಗೊಂಡಿದೆ. ಆದ್ದರಿಂದ ಇದು ಕೇವಲ ಮಕ್ಕಳಿಗಷ್ಟೇ ಅಲ್ಲದೆ ಪ್ರತಿಯೊಬ್ಬರನ್ನು ತನ್ನ ಸೆಳೆತಕ್ಕೆ ಒಳಪಡಿಸಿಕೊಳ್ಳುವ ಗುಣವನ್ನು ಹೊಂದಿದೆ ಎಂದು ಹೇಳಬಹುದು.

ಈ ರೀತಿಯ ಮಕ್ಕಳ ಸಾಹಿತ್ಯವು ಪ್ರಖ್ಯಾತಿ ಪಡೆದಿದ್ದು ಇಪ್ಪತ್ತನೇ ಶತಮಾನದಲ್ಲಿ. ಇಂತಹ ಸಾಹಿತ್ಯದ ಪ್ರಖ್ಯಾತಿಗೆ ಕಾರಣರಾದವರೇ, ಕನ್ನಡದಲ್ಲಿ ಮಕ್ಕಳ ಸಾಹಿತ್ಯದ ಜನಕರೆಂದೇ ಪ್ರಸಿದ್ಧರಾದ ಪಂಜೆ ಮಂಗೇಶರಾಯರು, ಶಿವರಾಮಕಾರಂತರು, ಗೋವಿಂದ ಪೈ, ಕುವೆಂಪು, ರಾಜರತ್ನಂ ಮೊದಲಾದವರು. ಇವರಿಗೆಲ್ಲ ಮಕ್ಕಳ ಬಗ್ಗೆ ಇದ್ದಂತಹ ಅಪಾರವಾದ ಕಾಳಜಿಯೇ ಈ ಸಾಹಿತ್ಯ ಸಮೃದ್ಧಿಯಾಗಿ ಬೆಳೆಯಲು ಕಾರಣವಾಯಿತು.

ಇಂತಹ ಕಾಳಜಿ ಇರುವವರಲ್ಲಿ ಒಬ್ಬರಾದ ರಾಷ್ಟ್ರಕವಿ ಕುವೆಂಪುರವರ ಮಕ್ಕಳ ಸಾಹಿತ್ಯವು ಒಂದು ಉನ್ನತ ಮಟ್ಟದ ಸ್ಥಾನವನ್ನು ಗಳಿಸಿಕೊಂಡಿದೆ. ಇಂತಹ ಸಾಹಿತ್ಯದಲ್ಲಿ ಮುಖ್ಯವಾಗಿ ಕವನ, ನಾಟಕ, ಕಥೆಗಳೆಂಬ ಪ್ರಕಾರಗಳನ್ನು ಕಾಣಬಹುದು. ಕುವೆಂಪುರವರು ಬರೆದಂತಹ ಇಂತಹ ಸಾಹಿತ್ಯವನ್ನು, ಕೃತಿಗಳನ್ನು ಹಿರಿಯರು ಕಿರಿಯರೆನ್ನದೆ ಪ್ರತಿಯೊಬ್ಬರು ಕೂಡ ಓದುವಂತಾಗಿದೆ.

ಕನ್ನಡದಲ್ಲಿ ಮಕ್ಕಳ ಸಾಹಿತ್ಯವನ್ನು ಕುರಿತಂತೆ ಅನೇಕರು ಮಕ್ಕಳ ಸಾಹಿತ್ಯದಲ್ಲಿರಬೇಕಾದ ಲಕ್ಷಣಗಳನ್ನು, ಮುಖ್ಯವಾದ ಅಂಶಗಳನ್ನು ಸೂಚಿಸಿದ್ದಾರೆ. ಅಂತಹವರಲ್ಲಿ ಮಕ್ಕಳ ಸಾಹಿತ್ಯದ ಜನಕರೆಂದೇ ಪ್ರಸಿದ್ಧರಾಗಿರುವ ಪಂಜೆ ಮಂಗೇಶರಾಯರು ಮಕ್ಕಳ ಸಾಹಿತ್ಯದ ಲಕ್ಷಣಗಳ ಬಗ್ಗೆ ಈ ಕೆಳಕಂಡಂತೆ ಗುರುತಿಸಿದ್ದಾರೆ.

ಪಂಜೆ ಮಂಗೇಶರಾಯರ ಪ್ರಕಾರ:

೧. "ಮಕ್ಕಳಿಗಾಗಿ ಬರೆಯುವ ಕಥಾ ವಿಷಯವು ಮಕ್ಕಳ ಪ್ರಪಂಚಕ್ಕೆ ಒಳಪಟ್ಟಿರಬೇಕು. ಮಕ್ಕಳ ಇಂದ್ರಿಯಗಳಿಗೆ ಗ್ರಹಣವಾಗುವ ವಿಷಯಗಳು ಮಕ್ಕಳ ಸಾಹಿತ್ಯದಲ್ಲಿರಬೇಕು. ಸಣ್ಣ ಮಕ್ಕಳಿಗೆ ರಚಿಸುವ ಸಾಹಿತ್ಯದ ಬಗೆಗೆ ಅರಿವಿರಬೇಕು.
೨. ಮಕ್ಕಳ ಕಥೆಗಳಲ್ಲಿ ಧರ್ಮಬೋಧನೆಯು ಅಂತರಂಗದಲ್ಲಿ ಅಡಗಿದ್ದಿರಬೇಕು. ಧರ್ಮಬೋಧನೆಗಾಗಿಯೇ ಕಥೆಯನ್ನು ಕಟ್ಟಿದಂತೆ ಇರಬಾರದು. ಧೈರ್ಯ, ಪರೋಪಕಾರ, ಸ್ವಾವಲಂಬನೆ, ದೀರ್ಘಪ್ರಯತ್ನ, ಸೌಹಾರ್ದ ಮೊದಲಾದ ಸದ್ಗುಣಗಳನ್ನು ಕಾರ್ಯರೂಪವಾಗಿ ತೋರಿಸತಕ್ಕ ಕಥೆಗಳು ಮಕ್ಕಳಿಗೆ ತಕ್ಕವು.
೩. ಮಕ್ಕಳ ಕಥೆಗಳಲ್ಲಿ ಒಂದಷ್ಟು ಅದ್ಭುತ ರಸವಿರಬೇಕು. ಮಕ್ಕಳಲ್ಲಿ ಕಲ್ಪನಾಶಕ್ತಿ ಹೆಚ್ಚು, ಆದ್ದರಿಂದ ಕಥೆಗಳಲ್ಲಿ ಅದ್ಭುತವಿದ್ದರೆ ಅವರ ಕಲ್ಪನಾಶಕ್ತಿಯ ಓಲಾಟಕ್ಕೆ ಅವಕಾಶವಾಗುತ್ತದೆ.
೪. ಮಕ್ಕಳ ಕಥೆಗಳಲ್ಲಿ ಪ್ರಯೋಗಿಸತಕ್ಕ ಭಾಷೆಯು ಸುಲಭವಿರತಕ್ಕದ್ದು; ಶಬ್ದಗಳು ಮನೆಮಾತುಗಳಾಗಿರಬೇಕು. ವಾಕ್ಯಗಳು ಉದ್ದವಿರದೆ ಚಿಕ್ಕದಾಗಿರುವುದು ಅಗತ್ಯ.
೫. ಕಥೆಗಳಲ್ಲಿ ಹೇಳಿಕೆಗಿಂತ ಸಂಭಾಷಣೆ ಅಧಿಕವಿರಬೇಕು. ಪುನರುಕ್ತಿಯು ಮಕ್ಕಳ ಸಾಹಿತ್ಯದಲ್ಲಿ ಅಗತ್ಯ. ಮಕ್ಕಳ ಕಥೆಗಳಲ್ಲಿ ವಿನೋದ, ಹಾಸ್ಯಗಳು ಅಗತ್ಯ. ಹಳೆಯ ಕಥೆಗಳಲ್ಲಿ ಇರುವ ಅಶ್ಲೀಲ, ಅಸಹ್ಯತೆಗಳನ್ನು ತೆಗೆದುಹಾಕಿ ಮಕ್ಕಳಿಗೆ ಒದಗಿಸಿಕೊಡಬೇಕು"[೧]

ಈ ರೀತಿಯಾಗಿ ಪಂಜೆ ಮಂಗೇಶರಾಯರು ಮಕ್ಕಳ ಸಾಹಿತ್ಯದ ಲಕ್ಷಣದ ಬಗ್ಗೆ ಸೂಚಿಸಿದ್ದಾರೆ.

ಮಕ್ಕಳ ಸಾಹಿತ್ಯವನ್ನು ಮುಖ್ಯವಾಗಿ 'ಶೈಶವ ಸಾಹಿತ್ಯ, ಬಾಲ ಸಾಹಿತ್ಯ, ಕೌಮಾರ ಸಾಹಿತ್ಯ' ಎಂದು ಮೂರು ವಿಧಗಳಾಗಿ ಗುರುತಿಸಲಾಗಿದೆ. ಹಾಗೆಯೇ ಮತ್ತೊಂದು

---

೧. ಪಂಜೆರಾಮರಾಯ (ಸಂ), ಪಂಜೆಯವರ ಕೃತಿಗಳು, ಪ್ರಬಂಧಗಳು ಮತ್ತು ಸಂಶೋಧನೆ, ಸಂಪುಟ-೪, ಓರಿಯಂಟ್ ಲಾಂಗಮನ್ ಲಿಮಿಟೆಡ್, ೧೯೭೩, ಪು. ೨೪.

ರೀತಿಯಲ್ಲಿ 'ಮಕ್ಕಳೇ ರಚಿಸಿದ ಸಾಹಿತ್ಯ, ಮಕ್ಕಳಿಗಾಗಿ ಹಿರಿಯರು ರಚಿಸಿರುವ ಸಾಹಿತ್ಯ, ಮಕ್ಕಳನ್ನು ಕುರಿತು ಬರೆದಿರುವ ಸಾಹಿತ್ಯ' ಎಂಬ ವಿಭಾಗವನ್ನು ಮಾಡಲಾಗಿದೆ.

ಇಲ್ಲಿ ಬರುವ ಶೈಶವ ಸಾಹಿತ್ಯದ ಮಕ್ಕಳು ಎಳೆಯ ವಯಸ್ಸಿನ ಮಕ್ಕಳಾಗಿರುತ್ತಾರೆ. ಇಂತಹ ಮಕ್ಕಳಿಗೆ ದೊಡ್ಡವರು ಏನೇ ಹೇಳಿದರು ಅದು ನಿಜವೆಂದು ನಂಬುವಂತಹ ಮುಗ್ಧತೆ ಅವರಲ್ಲಿರುತ್ತದೆ. ಆದ್ದರಿಂದ ಇಂತಹ ಮಕ್ಕಳಿಗೆ ಹೇಳುವ ಕಥೆ, ಹಾಡು, ನಾಟಕ ಇವುಗಳನ್ನು ಒಂದು ಕಲ್ಪನೆಯ ಮೂಲಕವೋ, ಊಹೆಗಳ ಮೂಲಕವೋ ಹೇಳಿದರು ಕೂಡ ಅದನ್ನು ಇಷ್ಟಪಟ್ಟು ಆಸಕ್ತಿಯಿಂದ ಕೇಳುತ್ತಾರೆ.

ಆದರೆ, ಹೆಚ್ಚಿನ ಮಟ್ಟದಲ್ಲಿ ಶೈಶವ ಸಾಹಿತ್ಯವೇ ಬಂದಿರುವುದರಿಂದ ಉಳಿದಂತಹ ಸಾಹಿತ್ಯಗಳು ಕೂಡ ಹೆಚ್ಚು ಹೆಚ್ಚು ಪ್ರಕಟಗೊಂಡು ಪ್ರಖ್ಯಾತಿಯನ್ನು ಪಡೆಯಬೇಕೆಂಬುದು ನನ್ನ ಆಶಯವಾಗಿದೆ.

ಇದೇ ರೀತಿ ಇನ್ನೊಂದು ವಿಧವನ್ನು ಗಮನಿಸುವುದಾದರೆ, ಮಕ್ಕಳಿಗಾಗಿ ಹಿರಿಯರು ರಚಿಸಿರುವ ಸಾಹಿತ್ಯ ಹೆಚ್ಚು ಹೆಸರನ್ನು ಮಾಡಿದೆ. ಆದರೆ, ಇನ್ನುಳಿದ ಸಾಹಿತ್ಯಗಳು ಅಷ್ಟಾಗಿ ಬೆಳೆದಿಲ್ಲ. ಆದ್ದರಿಂದ ಮಕ್ಕಳಿಗಾಗಿ ಇರುವಂತಹ ಪ್ರತಿಯೊಂದು ಸಾಹಿತ್ಯವು ಕೂಡ ಹೆಚ್ಚಿನ ಪ್ರಮಾಣದಲ್ಲಿ ಬೆಳೆಯಬೇಕು ಎಂಬುದರ ಜೊತೆಗೆ ಪ್ರತಿಯೊಂದು ಸಾಹಿತ್ಯಕ್ಕೂ ಸಮಾನವಾದ ಸಮಾನತೆಯನ್ನು ನೀಡಬೇಕು ಎಂಬುದು ನನ್ನ ಅಭಿಪ್ರಾಯ.

ಮಕ್ಕಳ ಸಾಹಿತ್ಯವು ಹುಟ್ಟಿದ ಪ್ರತಿಯೊಂದು ಮಗುವಿನ ಬೆಳವಣಿಗೆಗೆ ಸಹಾಯಕವಾಗಿದೆ. ಇಂತಹ ಸಾಹಿತ್ಯ ಕೃತಿಗಳು ಬಾಲ್ಯದಲ್ಲಿ ತಮ್ಮ ಮೇಲೆ ಯಾವ ರೀತಿ ಪ್ರಭಾವ ಬೀರಿತು ಎಂಬುದನ್ನು ಕುವೆಂಪುರವರು ಸ್ವತಃ ತಾವೇ ತಿಳಿಸಿದ್ದಾರೆ.

"ನನ್ನ ಆತ್ಮಕ್ಕೆ ಚೈತನ್ಯಪೂರ್ಣವಾದ ಒಂದು ಮಂತ್ರ ದೀಕ್ಷೆಯನ್ನೇ ಕೊಟ್ಟಿತ್ತು ಆ ಕವಿತೆ. 'ಜಗತ್ತು ಮತ್ತು ಜೀವನ ಬರಿಯ ಒಂದು ಶೂನ್ಯ ಸ್ವಪ್ನವಲ್ಲ. ಹಾಗೆಂದುಕೊಂಡು ನಿದ್ರಿಸುವ ಜೀವ ಸತ್ತಂತೆಯೇ ಸರಿ! ಬದುಕು ಮಿಥ್ಯೆಯಲ್ಲ; ಬದುಕು ಸದೃಢ ಸತ್ಯ, ಪಂಚಭೂತಗಳಿಂದ ಹುಟ್ಟಿ ಬಂದ ನೀನು ಪಂಚಭೂತಗಳಲ್ಲಿ ಸೇರಿ ಹೋಗುತ್ತೀಯೆ ಎಂಬುದು ಆತ್ಮಕ್ಕಲ್ಲ; ಆ ಮಾತು ಅನ್ವಯವಾಗುವುದು ದೇಹಕ್ಕೆ, ಕರ್ಮ ಮಾಡುವುದೇ ನಮ್ಮ ಕರ್ತವ್ಯ. ಇಂದಿಗಿಂತ ನಾಳೆ, ಒಂದೊಂದು ದಿನಕ್ಕೂ ನಮ್ಮ ದಾರಿ ಮುಮದುಮುಂದಕ್ಕೆ ಸಾಗುತ್ತಿರಬೇಕು. ವಿದ್ಯೆ, ಕಲೆ, ಜ್ಞಾನ ಇವು ಅನಂತ ಅಪಾರ. ನಮ್ಮ ಆಯಸ್ಸಾದರೋ ಕ್ಷಣಿಕವೆಂಬಂತೆ ಮಿಂಚಿ ಹರಿಯುತ್ತಿದೆ. ಯಾವತ್ತಾದರೂ ಮೃತ್ಯುವಿನ ಕರೆಬರಬಹುದು ನಮಗೆ.

ಆದ್ದರಿಂದ ಬದುಕಿನ ಕದನ ರಂಗದಲ್ಲಿ, ಮೂಕ ಪ್ರಾಣಿಗಳಂತಲ್ಲದೆ, ವೀರರಂತೆ ಹೋರಾಡುತ್ತಾ ಮುನ್ನುಗ್ಗಬೇಕು. ಭವಿಷ್ಯತ್ತಿನ ಸುಖ ಸ್ವಪ್ನ ನಂಬಿ ಕುಳಿತಿರಬಾರದು; ಹಾಗೆಯೇ ಕಳೆದ ಕಾಲದ ವೈಭವವನ್ನೇ ಮೆಲುಕು ಹಾಕುತ್ತಲೂ ಇರಬಾರದು; ಹಿಂದಕ್ಕೂ ನೋಡದೆ, ಮುಂದಕ್ಕೂ ಹಾಕದೆ, ಇಂದಿನದನ್ನು ಇಂದೆಯೆ ಮಾಡಿ ಪೂರೈಸಬೇಕು; ಹೃದಯದ ಧೈರ್ಯೋತ್ಸಾಹ ಕೆಡದೆ ಭಗವಂತನಲ್ಲಿ ಶ್ರದ್ಧೆಯಿಟ್ಟು, ಇದಕ್ಕೆಲ್ಲ ನಮಗೆ ಮಾರ್ಗದರ್ಶಿಗಳಾಗಿದ್ದಾರೆ ಜಗತ್ತಿನ ಮಹಾಪುರುಷರು.

ಅವರನ್ನು ಅನುಸರಿಸಿ ಅವರ ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ನಡೆದರೆ ನಮ್ಮ ಬದುಕು ಭವ್ಯವಾಗುತ್ತದೆ. ಅಳಿದ ಮೇಲೆ ನಾವೂ ಅವರಂತೆಯೇ ಕಾಲದ ಹೊಳೆಯ ಮರಳು ದಿಣ್ಣೆಯ ಮೇಲೆ ನಮ್ಮ ಹೆಜ್ಜೆ ಗುರುತುಗಳನ್ನು ಬಿಟ್ಟು ಹೋಗಬಹುದು. ಬಹುಶಃ ನಮ್ಮ ತರುವಾಯ ನಮ್ಮ ಹಿಂದೆ ಸಂಸಾರ ಮಹಾಸಾಗರದಲ್ಲಿ ತೇಲುತ್ತಾ ಬರುವ ಯಾವನಾದರೊಬ್ಬ ಹಡಗೊಡೆದು ದಿಕ್ಕುಗೆಟ್ಟು ಬರುವ ಜೀವನ ಪ್ರಯಾಣಿಕನು ಆ ನಮ್ಮ ಹೆಜ್ಜೆ ಗುರುತುಗಳನ್ನು ಕಂಡು ಧೈರ್ಯತಂದುಕೊಂಡು ಮುಂಬರಿಯಬಹುದು. ಆದ್ದರಿಂದ ಎದ್ದೇಳು! ಕಾರ್ಯ ನಿರತನಾಗು! ಬಂದದ್ದೆಲ್ಲಾ ಬರಲಿ! ಹೋಗುತ್ತಾ ಜಯಿಸುತ್ತಾ ಮುಂದುವರಿ! ಕರ್ಮ ಮಾಡುತ್ತಾ ತಾಳ್ಮೆಗೆಡದೆ ಕಾಯುವುದನ್ನು ಕಲಿ!

ಆಲಿಸುತ್ತಾ ಆಲಿಸುತ್ತಾ ನನ್ನ ಜೀವ ಜ್ವಾಲಾಮಯವಾಯ್ತು. ನನ್ನ ಅಂತಶ್ಚೇತನಕ್ಕೊಂದು ಮೊತ್ತಮೊದಲನೆಯ 'ಉಪನಯನ'ವಾಯ್ತು! ಚೈತನ್ಯ ಕಣ್ಣುಬಿಟ್ಟಿತು, ಎಚ್ಚರಗೊಂಡು! 'ಇನ್ನೆಲ್ಲಿಯ ನಿದ್ದೆ?'

ಆದರೆ ನನ್ನ ಬಾಲ್ಯದ 'ಗುರು'ವಾಗಿ ನನ್ನ ಚೇತನಕ್ಕೆ ಕಣ್ದೆರೆಯಿಸಿದ ಈ ಕವನ ನನ್ನ ಪ್ರಪ್ರಥಮ ದೀಕ್ಷಾಗುರುವಾಗಿಯೇ ನಿಂತಿದೆ!"[೧]

ಈ ರೀತಿಯಾಗಿ ಕುವೆಂಪುರವರು 'ಲಾಂಗ್ ಫೆಲೊ' ಕವಿಯ 'ದಿ ಸಾಮ್ ಆಫ್ ಲೈಫ್' ಎಂಬ ಕವಿತೆಯು ತಮ್ಮ ಬದುಕಿನ ದಿಕ್ಕನ್ನೇ ಬದಲಿಸುವಲ್ಲಿ ತುಂಬಾ ಪರಿಣಾಮಕಾರಿಯಾಗಿ ಪ್ರಭಾವ ಬೀರಿತೆಂಬುದನ್ನು ತಮ್ಮ ಆತ್ಮಕಥನದಲ್ಲಿ ತಿಳಿಸಿದ್ದಾರೆ.

ಹೀಗೆ ಒಂದು ಸತ್ಯಾಂಶದ ಮೂಲಕ ಸಾಹಿತ್ಯ ಎಂಬುದು ಮಕ್ಕಳ ಬೆಳವಣಿಗೆಗೆ ಎಷ್ಟು ಉಪಯೋಗವಾಗಿದೆ ಎಂಬುದನ್ನು ಅರಿಯಬಹುದು. ಆದ್ದರಿಂದಲೇ ಇರಬೇಕು ಕುವೆಂಪುರವರು ಪ್ರತಿಯೊಂದು ಮಗುವಿಗೂ ಸಾಹಿತ್ಯ ಅತೀ ಅವಶ್ಯಕ ಎಂದು ಅರಿತು ಎಲ್ಲಾ ಸಾಹಿತ್ಯಗಳಂತೆ ಮಕ್ಕಳ ಸಾಹಿತ್ಯಕ್ಕೂ ಕೂಡ ಉನ್ನತ ಸ್ಥಾನವನ್ನು ನೀಡಿದ್ದಾರೆ.

---

೧. ಕುವೆಂಪು, ನೆನಪಿನ ದೋಣಿಯಲ್ಲಿ ೧, ಸಹ್ಯಾದ್ರಿ ಪ್ರಕಾಶನ, ಕುವೆಂಪು ಟ್ರಸ್ಟ್, ಮೈಸೂರು, ೧೯೮೦, ಪು. ೧೧೨-೧೧೫.

'ಬೆಳೆಯುವ ಸಿರಿ ಮೊಳಕೆಯಲ್ಲಿ' ಎಂಬ ನುಡಿಯ ಪ್ರಕಾರ ಬೆಳೆಯುತ್ತಿರುವ ಮಕ್ಕಳಿಗೆ ತಂದೆ, ತಾಯಿ, ಗುರುಗಳಾದವರು ಯಾವ ರೀತಿಯ ಶಿಕ್ಷಣವನ್ನು ಅದರ ಜೊತೆಗೆ ವಾತಾವರಣವನ್ನು ಕಲ್ಪಿಸುತ್ತೇವೆಯೋ ಅದಕ್ಕೆ ತಕ್ಕಂತೆ ಅವರ ಬದುಕು ರೂಪಿತವಾಗುತ್ತಾ ಹೋಗುತ್ತದೆ. ಏಕೆಂದರೆ, ಮಕ್ಕಳದು ಹೂವಿನಂತ ಮನಸ್ಸು ಹೇಳುವ, ಕೇಳುವ ಯಾವುದೇ ವಿಷಯವಾಗಲಿ ಅದು ಅವರ ಮನಸ್ಸಿನ ಮೇಲೆ ಪರಿಣಾಮ ಬೀರುತ್ತಾ ಹೋಗುತ್ತದೆ. ಆದ್ದರಿಂದಲೇ ಮಕ್ಕಳ ಸಾಹಿತ್ಯವನ್ನು ರಚಿಸುವುದು ಅಷ್ಟು ಸುಲಭವಲ್ಲ. ಅತೀ ಜಾಗರೂಕತೆಯಿಂದ ರಚಿಸಬೇಕು ಎಂದು ಹೇಳಬಹುದು.

ರಷ್ಯಾದ ಶ್ರೇಷ್ಠ ಸಾಹಿತಿ 'ಮ್ಯಾಕ್ಸಿಂಗಾರ್ತಿ' ಈ ಬಗ್ಗೆ ಹೀಗೆ ಹೇಳಿದ್ದಾರೆ.

> "To successfully create fiction and education Literature for children we nee the following: First writers of talent capable of writing simply, Interestingly and meaningfully; then, editors of culture, with sufficient political and literary training and finally the technical facilities to guarantee the timely publication and due qualify of books for children".[೧]

"ಮುಂದೆ ಇವರೆ ಮಕ್ಕಳ ಸಾಹಿತ್ಯಕ್ಕೆ ಏನೇನು ವಸ್ತುವಾಗಬಲ್ಲುದು ಎಂದು ವಿವರವಾದ ಪಟ್ಟಿಯೊಂದನ್ನು ಕೊಡುತ್ತಾರೆ. ಭೂಮಿ, ಗಾಳಿ, ನೀರು, ಗಿಡ, ಪ್ರಾಣಿ. ಈ ಭೂಮಿಯಲ್ಲಿರುವ ಮಾನವನ ಉಗಮ, ಬೆಂಕಿಯ ಅನ್ವೇಷಣೆಯ ಮಹತ್ವ, ತಾಂತ್ರಿಕತೆ, ಮನುಷ್ಯ ಏಕೆ ಕಥೆ ಹೇಳುತ್ತಾನೆ, ಬರೆಯುತ್ತಾನೆ, ಧರ್ಮ ಎಂದರೇನು? ಅದರ ಪ್ರಯೋಜನವೇನು? ಚರಿತ್ರೆ ಎಂದರೇನು? ಅದರ ಪ್ರಯೋಜನವೇನು? ಹೀಗೆ ಅನೇಕ ವಿಷಯಗಳ ಬಗ್ಗೆ ಮಕ್ಕಳ ಸಾಹಿತ್ಯ ಬರೆಯುವಾತ ಚಿಂತಿಸಬೇಕಾಗುತ್ತದೆ. ಚಿಂತಿಸಿ, ತಮ್ಮ ಕೃತಿಗಳಿಗೆ ವಸ್ತುವನ್ನು ಆರಿಸಿಕೊಳ್ಳಬೇಕಾಗುತ್ತದೆ ಎಂದು ತಿಳಿಸಿದ್ದಾರೆ".[೨]

ಮಕ್ಕಳ ಮನಸ್ಸು ಮುಗ್ಧವಾಗಿರುವುದರಿಂದ ಅವರಿಗೆ ಕೆಟ್ಟದು, ಒಳ್ಳೆಯದು ಯಾವುದೆಂದು ಆಲೋಚಿಸುವ ಶಕ್ತಿಯೇ ಇರುವುದಿಲ್ಲ. ಸುಳ್ಳನ್ನು ಸತ್ಯವೆಂದು ಹೇಳಿದರೂ ಕೂಡ ಅದನ್ನು ನಂಬುವಂತಹ ಮನಸ್ಸು ಮಕ್ಕಳದ್ದಾಗಿರುತ್ತದೆ. ಹಾಗಾಗಿಯೇ ಸತ್ಯ, ಸುಳ್ಳು, ಮೋಸ, ವಂಚನೆ ಇವುಗಳ ಅರ್ಥವೇ ತಿಳಿದಿರುವುದಿಲ್ಲ. ಆದ್ದರಿಂದಲೇ ತಾನೇ ಮಕ್ಕಳನ್ನು

೧. ಶಿವರಾಮು ಕಾಡನಕುಪ್ಪೆ, ಕುವೆಂಪು ಸಾಹಿತ್ಯ ವಿಚಾರ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೯೦, ಪು. ೬೮.
೨. ಅದೇ, ಪು. ೬೮–೬೯.

ದೇವರಿಗೆ ಹೋಲಿಸುವುದು. ಇಂತಹ ಸನ್ನಿವೇಶದಲ್ಲಿ ಪ್ರತಿಯೊಂದು ಮಗುವು ತನ್ನ ತಂದೆ-ತಾಯಿಯನ್ನು ಅವಲಂಬಿಸಿರುತ್ತದೆ. ಅವರು ಹೇಳಿದ್ದನ್ನು ಕೇಳುತ್ತವೆ.

'ರಾಗೌ' ಅವರ ಅಭಿಪ್ರಾಯದಂತೆ: "ಕುವೆಂಪುರವರ ಮಕ್ಕಳ ಸಾಹಿತ್ಯ ಮಕ್ಕಳ ಮನೋವಿಕಾಸಕ್ಕೆ ಪುಷ್ಕಳವಾದ ಆಹಾರ. ಇದರಲ್ಲಿ ಮನರಂಜನೆಯಿದೆ. ಮನಸೆಳೆವ ರಮ್ಯ ಅಭಿವ್ಯಕ್ತಿಯಿದೆ ಹಾಗೂ ಉನ್ನತ ದರ್ಶನವಿದೆ" ಎಂದು ತಿಳಿಸಿದ್ದಾರೆ.

ಮಕ್ಕಳ ಸಾಹಿತ್ಯವನ್ನು ಕುರಿತಂತೆ ಬರೆಯುವವರು ಜನ್ಮಾಂತರದ ಕಲ್ಪನೆಯನ್ನು ಅರ್ಥ ಮಾಡಿಕೊಳ್ಳಬೇಕೆಂದು ಕುವೆಂಪು ಹೇಳಿದ್ದಾರೆ.

> "You must save our children from our religions. Let us have spirituality. But not religions. Spirituality is a fundamental scientific absolute truth. But religions are horrible. Every where they have created conflict terror and bloodshed".[೧]

ಈ ರೀತಿಯಾಗಿ ಕುವೆಂಪುರವರೆ ಅಧ್ಯಾತ್ಮ ಮತ್ತು ಮತಗಳಿಗಿರುವ ವ್ಯತ್ಯಾಸವನ್ನು ತಿಳಿಸಿ ಹೇಳಿದ್ದಾರೆ.

ಮೊದಲಿಗೆ ಕನ್ನಡದಲ್ಲಿ ಮಕ್ಕಳ ಸಾಹಿತ್ಯವನ್ನು ಆರಂಭಿಸಿದಂತಹ ಪಂಜೆ ಮಂಗೇಶರಾಯರು, ಶಿವರಾಮಕಾರಂತರ ಪರಂಪರೆಯನ್ನು ಮುಂದುವರಿಸಿದವರೇ ಕುವೆಂಪು.

ಕುವೆಂಪುರವರ ಕನ್ನಡದಲ್ಲಿನ ಮೊಟ್ಟಮೊದಲ ಕೃತಿ 'ಅಮಲನ ಕಥೆ' ಇದು 'ಗೋವಿನ ಕಥೆ'ಯ ಧಾಟಿಯಲ್ಲಿದ್ದು ೧೯೨೩ರಲ್ಲಿ ರಚಿತಗೊಂಡು ೧೯೨೪ರಲ್ಲಿ ಪ್ರಕಟವಾಗಿದೆ.

ಈ ಕೃತಿಯ ಬಗ್ಗೆ ಕುವೆಂಪುರವರು ತಮ್ಮ ಆತ್ಮಕಥನದಲ್ಲಿ ಈ ರೀತಿ ತಿಳಿಸಿದ್ದಾರೆ.

"ನಾನು ಕನ್ನಡದಲ್ಲಿ ಬರೆಯತೊಡಗಿದುದು ಶ್ರೀಯುತ ಕಸಿನ್ಸ್ ಅವರನ್ನು ಕಂಡ ಮೇಲೆಯೇ ಎಂಬುದು ಪೂರ್ತಿ ನಿಜವಲ್ಲ. ಅಮಲನ ಕಥೆಯನ್ನು ಅದಕ್ಕೆ ಮುಂಚೆಯೇ ೧೯೨೩ಎರಲ್ಲಿ ಬರೆದಿದ್ದೇನೆ"[೨]

---

೧. ಶಿವರಾಮು ಕಾಡನಕುಪ್ಪೆ, ಕುವೆಂಪು ಸಾಹಿತ್ಯ ವಿಚಾರ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೯೦, ಪು. ೭೧.

೨. ಕುವೆಂಪು, ನೆನಪಿನ ದೋಣಿಯಲ್ಲಿ ೧, ಸಹ್ಯಾದ್ರಿ ಪ್ರಕಾಶನ, ಕುವೆಂಪು ಟ್ರಸ್ಟ್, ಮೈಸೂರು, ೧೯೮೦, ಪು. ೨೩೮.

ತುಂಬಾ ಸರಳ ಭಾಷೆಯಿಂದ ಕೂಡಿರುವ ಈ ಕವನವು ಮಕ್ಕಳಿಗೆ ಹೆಚ್ಚು ಆಕರ್ಷಿತವಾಗಿದ್ದು, ಭಕ್ತಿ ಪ್ರಧಾನವಾದ ಅಂಶಗಳನ್ನು ಈ ಕೃತಿ ಒಳಗೊಂಡಿದೆ.

"ಬಡವನೊಬ್ಬನು ಇರುತ ಸುಖದಲಿ
ಮಡದಿ ಮಕ್ಕಳ ಕೂಡೆ ನಲಿಯುತ
ನುಡಿದ ಭಾಷೆಗೆ ಎರಡು ಬಗೆಯದೆ
ಪಡೆದನಚ್ಯುತ ಪದವಿಯ"[೧]

– ಈ ರೀತಿಯಾಗಿ ಪ್ರಾರಂಭವಾಗುವ ಈ ಕವನದಲ್ಲಿ ಒಬ್ಬ ಬಡವನು ತನ್ನ ಭಕ್ತಿಯ ಮೂಲಕ ದೇವರನ್ನು ಯಾವ ರೀತಿ ಒಲಿಸಿಕೊಂಡಿದ್ದಾನೆ ಎಂಬುದನ್ನು ತಿಳಿಯಬಹುದು.

ಈ ಕಥೆಯ ನಾಯಕ ಅಮಲ ಎಂಬುವನು ಸೌದೆ ಕಡಿದು ಅದನ್ನು ಮಾರಿ ಜೀವನವನ್ನು ಸಾಗಿಸುತ್ತಿರುತ್ತಾನೆ. ಈತ ಹರಿಯ ಭಕ್ತನಾಗಿದ್ದು ತನ್ನ ಭಕ್ತಿಯ ಮೂಲಕವೇ ದೈವವನ್ನು ಒಲಿಸಿಕೊಳ್ಳುತ್ತಾನೆ.

ಪ್ರತಿದಿನದಂತೆ ಅಮಲನು ಬೆಳಗಿನ ಜಾವ ಗಂಜಿಯುಂಡು ಹರಿಯನ್ನು ಧ್ಯಾನಿಸುತ್ತ ಹೆಗಲ ಮೇಲೆ ಕೊಡಲಿಯೇರಿಸಿಕೊಂಡು ಸೌದೆ ಕಡಿಯಲು ಕಾಡಿಗೆ ಹೋಗುತ್ತಾನೆ. ಕಾಡಿಗೆ ಹೋಗುತ್ತಿದ್ದಂತೆ ಅಮಲನು ದಾರಿ ಉದ್ದಕ್ಕೂ ಹರಿಯನ್ನು ಭಜಿಸುತ್ತ ಮುಂದೆ ಸಾಗುತ್ತನೆ.

"ನರರ ಕಾಯ್ವನೆ ಕಾಯು ನನ್ನನು;
ಸುರರ ಪೊರೆವನೆ ಸಲಹು ಸಕಲರ;
ಕರಗಳೆರಡನು ಮುಗಿದು ಬೇಡುವೆ;
ನಿರತ ನಿನ್ನನು ಪೊಗಳುವೆ"

ಇನಿತು ಪಾಡುತ ಕಾವ ದೇವನ
ವನದ ಸೊಬಗನು ನೋಡಿ ಪೊಗಳುತ
ಮನ ಸಂತಸ ತುಂಬಿ ತುಳುಕುತ
ಬನದಿ ನಡೆದನು ಅಮಲನು"[೨]

ಹೀಗೆ ಕಾಡಿನ ಸೊಬಗನ್ನು ಕಂಡು ಸಂತೋಷದಿಂದ ಕಾಡಿಗೆ ತೆರಳುತ್ತಾನೆ. ಇಲ್ಲಿ ಕುವೆಂಪುರವರು ಕಾಡಿನಲ್ಲಿರುವ ಪ್ರಕೃತಿ ಸೌಂದರ್ಯವನ್ನು ಕವನದ ಮೂಲಕ ರಮಣೀಯವಾಗಿ ಚಿತ್ರಿಸಿದ್ದಾರೆ. ಕಾಡಿನಲ್ಲಿರುವ ಮರ, ಗಿಡ, ಹೂ ಹಣ್ಣು ಹೂವಿನ

---

೧. ಕುವೆಂಪು, ಅಮಲನ ಕಥೆ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೪, ಪು. ೧.

೨. ಅದೇ., ಪು. ೨.

ಮಕರಂದವನ್ನು ಹೀರಲು ಬರುವ ದುಂಬಿ, ಬಣ್ಣಬಣ್ಣದ ಚಿಟ್ಟೆಗಳು, ಬೆಟ್ಟ-ಗುಡ್ಡ, ಹಚ್ಚ-ಹಸುರಿನಿಂದ ಕೂಡಿರುವ ಹುಲ್ಲುಗಳು ಹೀಗೆ ಇವುಗಳೆಲ್ಲವನ್ನು ಮಕ್ಕಳಿಗೆ ಪರಿಚಯಿಸುವುದರ ಮೂಲಕ ಮಕ್ಕಳೆಲ್ಲರು ಪ್ರಕೃತಿ ಸೌಂದರ್ಯವನ್ನು ಸವಿಯುವಂತೆ ಮಾಡಿದ್ದಾರೆ.

"ಎಲ್ಲಿ ನೋಡಿದರಲ್ಲಿ ಕೊಂಬೆಯು
ಮಲ್ಲಿಗೆಯ ಸೊಬಗಿಂದ ಮಿನುಗುತ
ಸಲ್ಲಲಿತ ಪರಿಮಳವ ಬೀರುವ
ಎಲ್ಲರೊಡೆಯನ ತೋರಿತು!

ಬಣ್ಣ ಬಣ್ಣದ ಹಣ್ಣು ಹೂಗಳು
ಬಣ್ಣಬಣ್ಣದ ಪಕ್ಷಿ ಪಶುಗಳು
ಬಣ್ಣ ಬಣ್ಣದ ಕೀಟ ಕ್ರಿಮಿಗಳು
ಬಣ್ಣ ಬಣ್ಣದಿ ಮೆರೆದುವು!"[೧]

ಈ ರೀತಿಯಾಗಿ ಕಾಡಿನ ಸೌಂದರ್ಯವನ್ನು ಕವಿ ಚಿತ್ರಿಸಿದ್ದಾರೆ.

ಹರಿಯ ಧ್ಯಾನಿಸುವುದರ ಜೊತೆಗೆ ಕಾಡಿನ ಸೌಂದರ್ಯವನ್ನು ಮೈದುಂಬಿಕೊಂಡು ಆನಂದದಿಂದ ಎಂದಿನಂತೆ ಸೌದೆಯನ್ನು ಕಡಿಯುತ್ತಾನೆ. ಸೌದೆಯನ್ನು ಕಡಿದು ಕಡಿದು ಸುಸ್ತಾಗಿ ಬಿಸಿಲಿನ ಬೇಗೆಗೆ ಬೆಂದು ಒಂದು ಮರದ ಕೆಳಗೆ ಮಲಗಿಬಿಡುತ್ತಾನೆ.

ಮಲಗಿರುವಾಗಲು ತನ್ನ ದೈವವನ್ನು ನೆನೆದು ನಿದ್ರಿಸುತ್ತಿರುವ ಸಂದರ್ಭದಲ್ಲಿ ಹರಿಣವೊಂದು ಅವನಲ್ಲಿಗೆ ಬಂದು ತನ್ನನ್ನು ಕೊಲ್ಲಲು ಬರುತ್ತಿರುವ ಬೇಡನಿಂದ ರಕ್ಷಿಸಬೇಕೆಂದು ಅಮಲನ ಹತ್ತಿರ ಬೇಡಿಕೊಳ್ಳುತ್ತದೆ. ಅದಕ್ಕೆ ಅಮಲ ತನ್ನ ಪ್ರಾಣವನ್ನು ಲೆಕ್ಕಿಸದೆ ಹಿಂದೆ-ಮುಂದೆ ನೋಡದೆ ಪ್ರಾಣ ರಕ್ಷಣೆಯ ಭರವಸೆಯನ್ನು ಕೊಡುತ್ತಾನೆ.

"ಅಮಲನಾಗಿಹ ನಾನು ನಿನ್ನನು
ಕಮಲನಾಭವ ಆಣೆಯಾಗಿಯು
ವಿಮಲತನವನು ಉಳಿಸಿಕೊಳ್ಳಲು
ಅಮಲ ಜೀವವನುಳುಹುವೆ"[೨]

ಎಂಬ ಮಾತುಗಳನ್ನಾಡುತ್ತಿದ್ದಂತೆ ಅತ್ತಕಡೆಯಿಂದ ಬೇಡ ಬರುತ್ತಿರುವುದನ್ನು ಕಂಡು ಅಮಲನು ಆತನಿಗೆ ಕೆಲವು ಬುದ್ಧಿಮಾತುಗಳನ್ನು ಹೇಳುತ್ತಾನೆ. ಆದರೆ ಅಮಲನ ಮಾತಿಗೆ ಬೆಲೆಕೊಡದ ಬೇಡನು ಹರಿಣವನ್ನು ಕೊಲ್ಲಲೇಬೇಕೆಂದು ಹೇಳಿದ ಸಂದರ್ಭದಲ್ಲಿ ಅಮಲನಿಗು

---

೧. ಕುವೆಂಪು, ಅಮಲನ ಕಥೆ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೪, ಪು. ೪.

೨. ಅದೇ., ಪು. ೧೧.

ಮತ್ತು ಬೇಡನಿಗು ಕಾದಾಟ ಪ್ರಾರಂಭವಾಗುತ್ತದೆ. ಮೊದಮೊದಲು ಅಮಲ ಸೋಲುತ್ತ ಬಂದಾಗ ಈ ರೀತಿ ಹರಿಯನ್ನು ಭಕ್ತಿಯಿಂದ ಬೇಡಿಕೊಳ್ಳುತ್ತಾನೆ.

"ಬಂದ ಬೇಡನ ಬಲವ ಜೈಸಲು
ಇಂದು ನನಗೆ ಬಲವನೀಯೋ!
ಮುಂದೆ ನಿನ್ನನು ಹೇಗೆ ಸೇರಲಿ
ಸಂದ ಭಾಷೆಯ ಕಳೆಯುತ?

ಎನಗೆ ಜೀವದ ಆಶೆ ಇಲ್ಲವು;
ಮನೆಯ ಸುತರನು ನೀನೆ ಕಾಯುವೆ;
ವನದ ಎರಳೆಗೆ ಭಾಷೆ ಇತ್ತೆನು
ಮನದ ಚಿಂತೆಯ ಹರಿವುದೈ"[೧]

ಅಮಲಿನ ಈ ಪ್ರಾರ್ಥನೆಗೆ ಓಗೊಟ್ಟ ಹರಿ ಅವನ ಭಕ್ತಿಗೆ ಒಲಿದು ಪ್ರತ್ಯಕ್ಷನಾಗಿ ಹರಿಣವನ್ನು ರಕ್ಷಿಸುವಂತೆ ಅಮಲನಿಗೆ ಆಶೀರ್ವದಿಸುತ್ತಾನೆ. ಇದರ ಮೂಲಕ ಅಮಲನ ದೈವಭಕ್ತಿ ಎಷ್ಟು ಗಾಢವಾಗಿತ್ತು ಎಂಬುದನ್ನು ತಿಳಿಯಬಹುದಾಗಿದೆ.

ಹಾಗೆಯೇ ಇತ್ತ ಕಡೆ ಕತ್ತಲಾದರೂ ತನ್ನ ಅಪ್ಪ ಮನೆಗೆ ಇನ್ನೂ ಬಂದಿಲ್ಲವೆಂದು ಆತಂಕಕ್ಕೆ ಒಳಗಾಗಿ ಮಗ ಮಧುರನು ತನ್ನ ತಾಯಿಯ ಆಜ್ಞೆಯಂತೆ ಪಂಜನ್ನು ಹಿಡಿದು ತಂದೆಯನ್ನು ಹುಡುಕಲು ಕಾಡಿಗೆ ಹೊರಡುವ ಸಂದರ್ಭದಲ್ಲಿ ಮೋಡ ಕವಿದು ಗುಡುಗು ಸಿಡಿಲಿನಿಂದ ಮಳೆ ಜೋರಾಗಿ ಸುರಿಯಲು ಆರಂಭವಾಗುತ್ತದೆ.

ಚಿಕ್ಕ ಬಾಲಕನಾದ ಮಧುರನು ಭಯದಿಂದ ನಡುಗಿ ಹರಿಯನ್ನು ಭಜಿಸುತ್ತಲೇ ಆ ದಟ್ಟವಾದ ಕಾಡಿನಲ್ಲಿ ಅಪ್ಪನನ್ನು ಹುಡುಕುತ್ತ ಮುಂದೆ ಸಾಗುತ್ತಾನೆ. ಹರಿಯನ್ನು ಧ್ಯಾನಿಸುತ್ತ ಧ್ಯಾನಿಸುತ್ತ ಇರುವಾಗಲೇ ಹರಿಯೇ ಪ್ರತ್ಯಕ್ಷವಾಗಿಬಿಡುತ್ತಾನೆ. ಹರಿಯ ದರ್ಶನದಿಂದ ಸಂತೋಷಗೊಂಡ ಮಧುರನಿಗೆ ಆಶೀರ್ವದಿಸುವ ಸಂದರ್ಭದಲ್ಲಿ

"ಎಲ್ಲಿ ಧರ್ಮ ಧ್ವಜವು ಇರುವುದೊ
ಎಲ್ಲಿ ಸತ್ಯವು ಆಳುತಿರುವುದೊ
ಎಲ್ಲಿ ಕರುಣೆಯು ಪಾಡುತಿರುವುದೊ,
ಅಲ್ಲಿ ನೆಲೆಸುವೆ ನಿತ್ಯದಿ"[೨]

ಎಂದು ಹೇಳಿ ಮಧುರನಿಗೆ ಬಂದಿದ್ದ ಕಷ್ಟವನ್ನು ಪರಿಹರಿಸಿ ಮುಗಿಲಲ್ಲಿ ಲೀನವಾಗುತ್ತಾನೆ.

---

೧. ಕುವೆಂಪು, ಅಮಲನ ಕಥೆ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೪, ಪು. ೧.
೨. ಅದೇ., ಪು. ೨೯.

ನಂತರ ಮಧುರನು ಮನೆಗೆ ಹಿಂತಿರುಗಿದಾಗ ತನ್ನ ಮಗನಿಗೆ ಅನೇಕ ತತ್ವೋಪದೇಶಗಳನ್ನು ಉಪದೇಶಿಸುತ್ತಾನೆ.

"ಸಾವು ಎಂಬುದು ಸುಳ್ಳು ತಾನದು
ದೇವನಾಗಿಹ ಎನ್ನ ಅಂಶಕೆ
ಹಾವು ಕಡಿದರು ಚೇಳು ಕಡಿದರು
ಸಾವು ಎಂದಿಗು ಬಾರದು

ಎಲ್ಲಿಯುಂ ಸುಖ ಸೌಖ್ಯವಿರುವುದು!
ಎಲ್ಲಿಯುಂ ಸುಜ್ಞಾನವಿರುವುದು!
ಎಲ್ಲಿಯುಂ ಚೈತನ್ಯನಿರುವನು!
ಎಲ್ಲಿಯುಂ ಜಗದೀಶನು!"[೧]

ಎಂದು ಉಪದೇಶಿಸುವ ಮೂಲಕ ಈ ಕಥೆಯು ಕೊನೆಗೊಳ್ಳುತ್ತದೆ.

ಈ ಕವನದಲ್ಲಿ ಕವಿಯು ಭಕ್ತಿಯನ್ನೇ ಪ್ರಧಾನವಾಗಿಟ್ಟುಕೊಂಡು ಚಿತ್ರಿಸಿದ್ದಾರೆ. ಅದರ ಜೊತೆಯಲ್ಲೇ ಪ್ರಕೃತಿಯ ವರ್ಣನೆ, ದೇವರ ದರ್ಶನವನ್ನು ನೀಡುವುದರ ಮೂಲಕ ಮಕ್ಕಳಲ್ಲಿ ಆಶ್ಚರ್ಯ, ಉತ್ಸಾಹ, ಆನಂದವನ್ನುಂಟು ಮಾಡುವುದರಲ್ಲಿ ಯಶಸ್ವಿಯಾಗಿದ್ದಾರೆ. ಮುಗ್ಧ ಮನಸ್ಸಿನ ಮಕ್ಕಳಿಗೆ ದೇವರು ಒಲಿಯುತ್ತಾನೆ ಎಂಬುದನ್ನು 'ಅಮಲನ ಕಥೆ'ಯ ಮೂಲಕ ತಿಳಿಯಬಹುದಾಗಿದೆ. ನಿಷ್ಕಲ್ಮಷ ಭಕ್ತಿಗೆ ದೇವರು ಒಲಿಯುತ್ತಾನೆ ಎಂಬುದನ್ನು ಕವಿ ಈ ಕೃತಿಯ ಮೂಲಕ ತಿಳಿಸಿದ್ದಾರೆ.

ಕುವೆಂಪು ಅವರಿಗೆ ಅಪಾರವಾಗಿ ಜನಪ್ರಿಯತೆಯನ್ನು ತಂದುಕೊಟ್ಟ ಒಂದು ಸುಂದರ ನೀಳ್ಗವನವೇ 'ಬೊಮ್ಮನಹಳ್ಳಿಯ ಕಿಂದರಿಜೋಗಿ'. ಇದು ೧೯೨೬ರಲ್ಲಿ ಪ್ರಕಟವಾಗಿದ್ದು ೪೨೮ ಸಾಲುಗಳನ್ನು ಒಳಗೊಂಡಿದೆ. ಈ ಕವನವು ಕೇವಲ ಮಕ್ಕಳಿಗಷ್ಟೇ ಅಲ್ಲ ದೊಡ್ಡವರಿಗೂ ಸಹಾ ಆಕರ್ಷಿತವಾಗಿದೆ.

"ತುಂಗಾತೀರದ ಬಲಗಡೆಯಲ್ಲಿ
ಹಿಂದಲ್ಲಿದ್ದುದು ಬೊಮ್ಮನಹಳ್ಳಿ
ಅಲ್ಲೇನಿಗಳ ಕಾಟವೆ ಕಾಟ
ಅಲ್ಲಿಯ ಜನಗಳಿಗತಿಗೋಳಾಟ
ಇಲಿಗಳು!

---

೧. ಕುವೆಂಪು, ಅಮಲನ ಕಥೆ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೪, ಪು. ೩೨.

ಬಡಿದುವು ನಾಯಿಗಳ!

ಇಲ್ಲಿಗಳು

ಕಡಿದುವು ಬೆಕ್ಕುಗಳ!

ಕೆಲವನು ಕೊಂದವು, ಕೆಲವನು ತಿಂದುವು

ಕೆಲವನು ಬೆದರಿಸಿ ಹಿಂಬಾಲಿಸಿದುವು"[೧]

ಹೀಗೆ ಪ್ರಾರಂಭವಾಗುವ ಈ ಕವನದಲ್ಲಿ ಮೊದಲಿಗೆ ಬೊಮ್ಮನ ಹಳ್ಳಿಗೆ ಇರುವಂತಹ ಇಲಿಗಳ ಸಮಸ್ಯೆಯನ್ನು ಕುವೆಂಪುರವರು ತಮ್ಮ ಪದಜೋಡಣೆಯ ಮೂಲಕ ಹಾಸ್ಯ ಪ್ರಸಂಗವಾಗಿ ಎಲ್ಲರಿಗೂ ಇಷ್ಟವಾಗುವಂತೆ ಈ ಕವನವನ್ನು ರಚಿಸಿದ್ದಾರೆ.

ಈ ಹಳ್ಳಿಯ ಜನರು ಇಲಿಗಳ ಕಾಟದಿಂದ ಬೇಸತ್ತಿದ್ದಾರೆ. ಅಲ್ಲಿನ ಇಲಿಗಳು ನಾಯಿಗಳನ್ನು, ಬೆಕ್ಕುಗಳನ್ನು ಕಡಿದು, ಕೊಂದವು. ಹಾಲಿನ ಮಡಕೆ, ಅನ್ನದ ಗಡಿಗೆಗಳನ್ನು ಪುಡಿ ಮಾಡಿದವು. ಹಾಸಿಗೆ ಹರಿದು, ಕೂದಲನ್ನು ಕತ್ತರಿಸಿ, ಭಟ್ಟಶಾಸ್ತ್ರೀಯ ಜನಿವಾರವನ್ನೇ ತಿಂದುಹಾಕಿದವು. ಇಷ್ಟೆಲ್ಲಾ ಇಲಿಗಳ ಕಾಟವನ್ನು ತಾಳಲಾರದೆ ಆ ಹಳ್ಳಿಯ ಜಟ್ಟಕ್ಕ ಎಂಬುವಳು ಬತ್ತಿರುವ ಕೆರೆಗೆ ಹಾರಿಬಿಟ್ಟಳು. ಈ ರೀತಿಯೆಲ್ಲಾ ಇಲಿಗಳು ಹಳ್ಳಿಯ ಜನರಿಗೆ ತೊಂದರೆ ಕೊಟ್ಟಿತು. ಈ ಇಲಿಗಳನ್ನು ಕೊಲ್ಲಲು ಅಲ್ಲಿನ ಜನ ಏನೇ ಪ್ರಯತ್ನಪಟ್ಟರು ಸಾಧ್ಯವಾಗಲೇ ಇಲ್ಲ. ಅದಕ್ಕಾಗಿ ಮುಂದೆ ದಾರಿ ತೋರದೆ ಆ ಊರಿನ ಗೌಡನ ಹತ್ತಿರ ಸಮಸ್ಯೆಯನ್ನು ಹೇಳಿ ಬಗೆಹರಿಸುವಂತೆ ಕೇಳಿಕೊಂಡರು. ಜೊತೆಗೆ ಆ ಹಳ್ಳಿಯ ಜನರೇ ಆ ಗೌಡನನ್ನು ಮೂದಲಿಸಿ ಬೈದರು.

"ಹೊರಟವು ಯುಕ್ತಿಯ ಮಾತುಗಳು

ಮಾತೊಳು ಮನೆಯನು ಕಟ್ಟಿದರು

ಅಂತೂ ಇಲಿಗಳ ಕೊಲ್ಲುವ ಬಗೆಯು

ಒಬ್ಬರಿಗಾದರು ಹೊಳೆಯಲೆ ಇಲ್ಲ

ಗೌಡನು ತಲೆತಲೆ ಹೊಡಕೊಂಡ

ಅಲ್ಲದೆ ಎದೆಎದೆ ಬಡಕೊಂಡ"[೨]

ನಂತರ ಹಳ್ಳಿಯ ಅನೇಕರು ಹಲವಾರು ಸಲಹೆಗಳನ್ನು ನೀಡಿದರು. ಆದರೆ ಅದೆಲ್ಲ ಸರಿಹೋಗದೆ ಗೌಡನು ಯೋಚಿಸಿ ಇಲಿಗಳ ಸಮಸ್ಯೆಯನ್ನು ಯಾರು ಬಗೆಹರಿಸುವರೊ ಅವರಿಗೆ ಆರು ಸಾವಿರ ನಾಣ್ಯಗಳನ್ನು ಕೊಡುವುದಾಗಿ ಹೇಳುತ್ತಾನೆ.

---

೧. ಕುವೆಂಪು, ಬೊಮ್ಮನಹಳ್ಳಿಯ ಕಿಂದರಿಜೋಗಿ, ಉದಯರವಿ ಪ್ರಕಾಶನ, ವಾಣಿವಿಲಾಸ ಪುರಂ, ೧೯೭೩, ಮೈಸೂರು, ಪು. ೧.

೨. ಅದೇ., ಪು. ೮.

ಊರಿನ ಜನರೆಲ್ಲರು ತಲೆಕೆಡಿಸಿಕೊಂಡು ಒಬ್ಬರ ಮುಖವನ್ನು ಒಬ್ಬರು ನೋಡಿಕೊಳ್ಳುತ್ತ ಪೇಚಾಡುತ್ತಿರುವ ಸಂದರ್ಭದಲ್ಲಿ ಕಿಂದರಿನಾದದ ಮೂಲಕ ಕಿಂದರಿಜೋಗಿಯ ಆಗಮನವಾಗುತ್ತದೆ.

"ಬಂದನು ಬಂಡನು ಕಿಂದರಿ ಜೋಗಿ!
ಕೆದರಿದ ಕೂದಲ ಗಡ್ಡದ ಜೋಗಿ!
ನಾನಾ ಬಣ್ಣದ ಬಟ್ಟೆಯ ಜೋಗಿ!
ಕೈಯಲಿ ಕಿಂದರಿ ಹಿಡಿದಾ ಜೋಗಿ!" [೧]

ಈ ರೀತಿಯಾಗಿ ವಿಚಿತ್ರ ರೂಪದಿಂದ ಕೂಡಿದ ಕಿಂದರಿ ಜೋಗಿಯ ಆಗಮನದ ಮೂಲಕ ಕುವೆಂಪು ಎಲ್ಲರ ಗಮನವನ್ನು ಸೆಳೆದಿದ್ದಾರೆ. ಜೋಗಿಯನ್ನು ನೋಡುತ್ತಿದ್ದಂತೆ ನಡುಗುತ್ತಲೇ ನೀನು ಯಾರೆಂದು ಗೌಡ ಕೇಳಿದಾಗ ಪರಮೇಶ್ವರನ ಗೆಳೆಯನಾದ ನಾನು ಹಿಮಗರಿಯಲ್ಲಿರುವ ನನ್ನನು ನಿಮ್ಮ ಸಮಸ್ಯೆಯನ್ನು ಕೇಳಿದ ಶಿವನೇ ಇಲ್ಲಿಗೆ ಕಳುಹಿಸಿರುವನೆಂದು ಉತ್ತರಿಸುತ್ತಾನೆ.

ನಂತರದಲ್ಲಿ ತನ್ನ ಕಿಂದರಿ ನಾದದ ಮೂಲಕ, ಮಂತ್ರದ ಮೂಲಕ ಇಲಿಗಳ ಸಮಸ್ಯೆಯನ್ನು ಬಗೆಹರಿಸಲು ಮುಂದಾದನು.

ಇಲಿಗಳು! ಇಲಿಗಳು! ಇಲಿಗಳ ಹಿಂಡು!
ಬಳಬಳ ಬಂದುವು ಇಲಿಗಳ ದಂಡು!

ಬಂದುವು ಅಂಗಿಯ ಜೇಬನು ಬಿಟ್ಟು
ಮಕ್ಕಳ ಕಾಲಿನ ಚೀಲವ ಬಿಟ್ಟು
ಹಾರುತ ಬಂದುವು, ಓಡುತ ಬಂದುವು
ನೆಗೆಯುತ ಬಂದುವು, ಓಡುತ ಬಂದುವು
ಜೋಗಿಯೆ ಬಾರಿಸೆ ಕಿಂದರಿಯ!" [೨]

ಈ ರೀತಿಯಾಗಿ ಇದ್ದಂತಹ ಎಲ್ಲಾ ಇಲಿಗಳು ಬೀದಿಗಿಳಿದವು. ಕೊನೆಗೆ ಕಿಂದರಿಯ ನಾದದಿಂದ ಇಷ್ಟು ದಿನಗಳಿಂದ ಕಾಟ ಕೊಡುತ್ತಿದ್ದ ಇಲಿಗಳೆಲ್ಲ ನೀರಿನಲ್ಲಿ ಮುಳುಗಿ ಹೆಣಗಳಾದವು. ಹಳ್ಳಿಯ ಸಮಸ್ಯೆಯನ್ನು ಬಗೆಹರಿಸಿದ ಕಿಂದರಿ ಜೋಗಿಗೆ ಮಾತು ಕೊಟ್ಟಂತೆ ಆರು ಸಾವಿರ ನಾಣ್ಯಗಳನ್ನು ಕೊಡಲು ಹಿಂಜರಿದ ಗೌಡನನ್ನು ಸಂಕಷ್ಟಕ್ಕೆ ಸಿಲುಕಿಸುತ್ತಾನೆ.

---

೧. ಕುವೆಂಪು, ಬೊಮ್ಮನ ಹಳ್ಳಿಯ ಕಿಂದರಿಜೋಗಿ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೭೩, ಪು. ೧೧.
೨. ಅದೇ., ಪು. ೧೭.

ಕಿಂದರಿ ನಾದಕ್ಕೆ ಮನಸೋತ ಮಕ್ಕಳು ತನ್ನ ಮನೆ, ತಂದೆ–ತಾಯಿ ಎಲ್ಲರನ್ನು ಬಿಟ್ಟು ಜೋಗಿಯನ್ನು ಹಿಂಬಾಲಿಸಿದರು. ಹಳ್ಳಿಯ ಮಕ್ಕಳೆಲ್ಲ ಎಷ್ಟೇ ಹೇಳಿದರು ಕೇಳದೆ ಅವನ ನಾದಕ್ಕೆ ಇಷ್ಟಪಟ್ಟು ಜೊತೆಗೆ ಹಿಂಬಾಲಿಸಿದರು. ಜೋಗಿಯು ಅವನ ಕಿಂದರಿ ನಾದದ ಮೂಲಕ ಒಂದು ಹೊಸ ಲೋಕಕ್ಕೆ ಮಕ್ಕಳನ್ನು ಕರೆದುಕೊಂಡು ಹೋಗುತ್ತಾನೆ. ಆ ಲೋಕದಲ್ಲಿ ಮಕ್ಕಳಿಗೆ ಸಿಗದೇ ಇರುವಂತಹ ವಸ್ತುಗಳೆಲ್ಲ ಸಿಗುತ್ತವೆ. ಮಕ್ಕಳು ಸ್ವರ್ಗವನ್ನು ಕಂಡಂತೆ ಸಂತೋಷವನ್ನುಪಡುತ್ತಾರೆ. ಆ ಲೋಕದ ಬಗ್ಗೆ ತಿಳಿದ ಕುಂಟನು ತಾನು ಕೂಡ ಇತರ ಮಕ್ಕಳಂತೆ ಜೋಗಿಯ ಲೋಕಕ್ಕೆ ಹೋಗಲು ಸಾಧ್ಯವಿಲ್ಲವೆಂದು ತಿಳಿದು ರೋದಿಸುತ್ತಾನೆ.

"ಅಯ್ಯೋ ಎನಗಿಲ್ಲವರಾನಂದ!
ಜೋಗಿಯು ಕಿಂದರಿ ಬಾರಿಸೆ ಕಂಡೆವು

ಬಣ್ಣದ ಮನೆಗಳ ಪಟ್ಟಣವ
ಹಣ್ಣುಗಳುದುರಿದ ತೋಟಗಳ!

ನಾನಾ ಆಟದ ಸಾಮಾನುಗಳ
ತರತರ ರಾಗದ ಗೊಂಬೆಗಳ

ಕೈಗೆ ಸಿಕ್ಕುವ ಹಕ್ಕಿಗಳ!

ಜಿಂಕೆಗಳೆಮ್ಮೊಡನಾಡಿದುವಲ್ಲಿ
ಮೊಲಗಳು ಕುಳಿತುವು ಮೈಮೇಲಲ್ಲಿ!

ಅಯ್ಯೋ ಹೋಯಿತೆ ಆ ನಾಕ!
ಅಯ್ಯೋ ಬಂದಿತೆ ಈ ಲೋಕ!"[೧]

ಈ ರೀತಿಯಾಗಿ ಆ ಹಳ್ಳಿಯ ಕುಂಟ ಹುಡುಗನ ಮೂಲಕ ಕುವೆಂಪುರವರು ತಮ್ಮ ಕನಸಿನ ಲೋಕವನ್ನು ಈ ಕವನದ ಮೂಲಕ ಚಿತ್ರಿಸಿದ್ದಾರೆ. ಅವರ ಕನಸು ನನಸಾಗುವುದು ನಮ್ಮೆಲ್ಲರ ಕೈಯಲ್ಲಿದೆ.

"ಕನ್ನಡ ಪದಗಳ ಲಾಲಿತ್ಯ ಕಿಂದರಿಯ ನಾದವಾಗಿಯೇ ನಮ್ಮ ಕಿವಿಗಳಲ್ಲಿ ನುಡಿಯುತ್ತದೆ, ಮನಸ್ಸಿನಲ್ಲಿ ಮಿಡಿಯುತ್ತದೆ. ಹೃದಯವನ್ನು ಅರಳಿಸುತ್ತದೆ! ಕಿಂದರಿ ಜೋಗಿ ಬೊಮ್ಮನಹಳ್ಳಿಯ ಮಕ್ಕಳನ್ನೆಲ್ಲ ತನ್ನ ಕಿನ್ನರಿ ನಾದದಲ್ಲಿ ಮೋಹಿಸಿ ಬಂಡೆಯ ಬಾಯನ್ನು

---

೧. ಕುವೆಂಪು, ಬೊಮ್ಮನಹಳ್ಳಿಯ ಕಿಂದರಿಜೋಗಿ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೭೩, ಪು. ೨೭.

ಸೇರಿಕೊಂಡು ಕಣ್ಮರೆಯಾದ; ಆದರೆ ಕುವೆಂಪು ನುಡಿಸಿದ ಕಿಂದರಿನಾದ 'ಬೊಮ್ಮನಹಳ್ಳಿಯ ಕಿಂದರಿಜೋಗಿ' ಕಥನ ಕವನದ ರೂಪದಲ್ಲಿ ಇನ್ನೂ ತನ್ನ ನಾದದಿಂದ ಕನ್ನಡದ ಮಕ್ಕಳನ್ನೆಲ್ಲ ಸೆಳೆಯುತ್ತಲೇ ಇದೆ"[೧] ಎಂದು ಜೀ.ಶಂ.ಪರಮಶಿವಯ್ಯನವರು 'ಸಹ್ಯಾದ್ರಿ' ಅಭಿನಂದನ ಗ್ರಂಥದ 'ಕಿಂದರಿಜೋಗಿ' ಲೇಖನದಲ್ಲಿ ಹೇಳಿದ್ದಾರೆ.

ಆದರೆ ಈ ಕವನವು ಕೇವಲ ಮಕ್ಕಳಿಗಷ್ಟೇ ಅಲ್ಲದೆ ದೊಡ್ಡವರಿಗೂ ಸಹ ಮನಸೆಳೆಯುವಲ್ಲಿ ಯಶಸ್ವಿಯಾಗಿದೆ.

"ಬಾ ಪುರದ ಗೆಳೆಯನೇ, ಹಾಳೂರ ನೋಡು
ಹಾಳೂರು ಇದು ನಮ್ಮ ರೈತರಿಹ ಬೀಡು;
ದೇಶಕನ್ನವ ನೀಡುವರಿಗೆಲ್ಲ ಗೂಡು
ನಮ್ಮೂರು ದಿನದಿನವು ಆಗುತಿದೆ ಕಾಡು!
ಅರೆಮುರಿದು ಒರಗಿಹವು ಗುಡಿಸಲುಗಳೆಲ್ಲ,
ಸರಿಮಾಡಿ ಹುಲ್ಲುಹೊದಿಸುವರೊಬ್ಬರಿಲ್ಲ;
ಪುರಗಳನು ಸೇರಿದರು ಹಳ್ಳಿಯವರೆಲ್ಲ;
ಹಳ್ಳಿ ನಿರ್ಜನವಾಯ್ತು; ಕೇಳುವರೆ ಇಲ್ಲ!
ನಲಿದಾಡುತಿದ್ದಿತ್ತೆ ನಮ್ಮೂರು ಅಂದು;
ಕಳೆಯಿಲ್ಲದಾಗಿಹುದು ಹಾಳೂರು ಇಂದು!"[೨]

ಎಂದು ಪ್ರಾರಂಭವಾಗುವ ಹಾಳೂರು ಕವಿತೆಯು ೫೩೮ ಸಾಲುಗಳನ್ನು ಒಳಗೊಂಡಿದ್ದು 'ಗೋಲ್ಡ್‌ಸ್ಮಿತ್ ಕವಿಯ 'ಡೆಸೆರ್ಟೆಡ್ ವಿಲೇಜ್'ನಿಂದ ಪ್ರೇರಿತವಾದ ಒಂದು ನೀಳ್ಗವನವಾಗಿ ಕುವೆಂಪುರವರು ಚಿತ್ರಿಸಿದ್ದಾರೆ.

ಕವನದ ಪ್ರಾರಂಭದಲ್ಲೇ ಕವಿಯು ಹಳ್ಳಿಯ ಪರಿಸ್ಥಿತಿಯ ಬಗ್ಗೆ, ತಮ್ಮ ಗೆಳೆಯನ ಜೊತೆಯಲ್ಲಿ ಕೂಡಿ ಬೆಳೆದ, ಆಟವಾಡಿದ ನೆನಪುಗಳನ್ನು ಮತ್ತೆ ಮತ್ತೆ ನೆನಪಿಸಿಕೊಂಡು ಆಗಿನ ಹಳ್ಳಿಯ ಪರಿಸ್ಥಿತಿಗು – ಈಗಿರುವ ಹಳ್ಳಿಯ ಪರಿಸ್ಥಿತಿಗೂ ಅಜಗಜಾಂತರ ವ್ಯತ್ಯಾಸಗಳಿವೆ ಎಂದು ಕುವೆಂಪುರವರು ಹಾಳೂರು ಎಂಬ ಕವನದ ಮೂಲಕ ಹಳ್ಳಿಯ ಜೀವನವನ್ನು ಅಲ್ಲಿಯ ಪರಿಸ್ಥಿತಿಯನ್ನು ಚಿತ್ರಿಸಿದ್ದಾರೆ.

---

೧. ಡಾ. ಬೈರಮಂಗಲ ರಾಮೇಗೌಡ, ರಸಸಿದ್ಧಿ, ಕುವೆಂಪು ಕಾವ್ಯ ವಿಮರ್ಶೆ, ಲಕ್ಷ್ಮೀ ಮುದ್ರಣಾಲಯ, ಚಾಮರಾಜಪೇಟೆ, ಬೆಂಗಳೂರು. ೨೦೦೩, ಪು. ೧೨೫.

೨. ಕುವೆಂಪು, ಹಾಳೂರು, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೬, ಪು. ೧೭.

ನಮ್ಮ ಬಾಲ್ಯದಲ್ಲಿ ಬೀಸುತ್ತಿದ್ದ ಗಾಳಿ, ಉದಯಿಸುತ್ತಿದ್ದ ಸೂರ್ಯ, ಆಕಾಶ, ಮಳೆ, ಬೆಳಕುಗಳು ಇಂದೂ ಇದ್ದರು ಕೂಡ ಅಂದಿನಂತೆ ಸಂತೋಷವನ್ನು ಕೊಡುತ್ತಿಲ್ಲ. "ಎಲ್ಲಿ ಹೋಯಿತು ಅಂದಿನಾನಂದವಿಂದು? ಹಳ್ಳಿಯಿದು ಹಾಳಾಯ್ತೆ ಮುಂದೆ ಎಂದೆಂದೂ"? ಎಂದು ಕುವೆಂಪುರವರು ಹಳ್ಳಿಯನ್ನು ನೋಡಿ ತಮ್ಮ ದುಃಖವನ್ನು ವ್ಯಕ್ತಪಡಿಸುತ್ತಿದ್ದಾರೆ.

ಹಿಂದೆ ಹಳ್ಳಿಗಳಲ್ಲಿ ಯಾವುದೇ ಸಮಸ್ಯೆ ಬಂದರು ಅದನ್ನು ಊರಿನ ಗೌಡರು ಪಂಚಾಯ್ತಿ ಕಟ್ಟೆಯ ಮೂಲಕ ಬಗೆಹರಿಸುತ್ತಿದ್ದರು. ಆದರೆ, ಈಗಿನ ಸಂದರ್ಭವೇ ಬೇರೆಯಾಗಿದೆ. ಲಾಯರುಗಳು ಕೋರ್ಟಿನ ಮೂಲಕ ಬಡ-ಬಗ್ಗರನ್ನು ಶೋಷಣೆಗೆ ಒಳಪಡಿಸಿ ಅವರ ಹತ್ತಿರ ಹಣ ವಸೂಲಿಮಾಡಿ ಅವರ ಸಮಸ್ಯೆಯನ್ನು ಬಗೆಹರಿಸದೆ ಇರುವಂತಹ ಸಮಸ್ಯೆಯನ್ನು ಮತ್ತಷ್ಟು ಹೆಚ್ಚಿಸುವ ಪರಿಸ್ಥಿತಿಗೆ ತಂದೊಡ್ಡುತ್ತಾರೆ.

"ಹಳ್ಳಿಯೊಳು ಮನೆಬಿದ್ದು ಹಾಳಾಗುತಿಹವು,
ಪೇಟೆಯೊಳು ಲಾಯರರ ಮನೆಯೇಳುತಿಹವು
ಹಳ್ಳಿಯರ ರಕ್ತವನು ದೂರದಿಂ ಹೀರಿ
ಕೊಬ್ಬಿ ಬೆಳೆದಿಹರು ಲಾಯರರು ಮಿತಿಮೀರಿ"[೧]

ಇಂದಿನವರೆಲ್ಲರೂ ತಮ್ಮ ತಮ್ಮ ಮಾತೃಭಾಷೆಗಳನ್ನು ಬಿಟ್ಟು ಪರಿಭಾಷೆಗಳಿಗೆ ಪ್ರಾಮುಖ್ಯತೆಯನ್ನು ನೀಡುತ್ತಿದ್ದಾರೆ. ಆದರೆ ಹಳ್ಳಿಯಲ್ಲಿದ್ದ ತಾತಯ್ಯನಿಗಿದ್ದಂತಹ ತಾಯ್ನುಡಿ ಪ್ರೀತಿ, ಆತ ಜೈಮಿನಿ ಭಾರತವನ್ನು ಓದಿ ಹಳ್ಳಿ ಜನರಿಗೆ ಅದರ ಅರ್ಥವನ್ನು ತಿಳಿಸುತ್ತಿದ್ದ ಶೈಲಿ ಎಂದಿಗೂ ಮರೆಯುವಂತಿಲ್ಲ. ಆ ಊರಿನ ವಿದ್ವಾಂಸನಾಗಿ ಇರುತ್ತಿದ್ದನು. ಆದರೆ, ಈಗಿರುವ ಪರಿಸ್ಥಿತಿಯೇ ಬೇರೆಯಾಗಿದೆ. ಪರಭಾಷೆಯ ವ್ಯಾಮೋಹಕ್ಕೆ ಒಳಗಾಗಿ ಇತರ ಭಾಷೆಗಳಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಲಾಗುತ್ತಿದೆ.

ಹಳ್ಳಿಯ ಜನರೆಲ್ಲರು ಪಟ್ಟಣದ ವ್ಯಾಮೋಹದಿಂದ ಹಳ್ಳಿಗಳನ್ನು ತೊರೆದು ಪಟ್ಟಣಗಳನ್ನು ಸೇರಿದರು. ಅಲ್ಲಿನ ನಾಗರಿಕತೆಗೆ ತಕ್ಕಂತೆ ದುರ್ನಡತೆಗೆ ತುತ್ತಾಗಿ ಕುಡಿಯುವುದು, ಜೂಜಾಟವಾಡುವುದನ್ನು ಕಲಿತು ಸಂಪಾದಿಸಿದ ಹಣವನ್ನು ಆಡಂಬರವಾಗಿ ಖರ್ಚುಮಾಡಲಾಗಿದೆ. ಮೇಲು ನೋಟಕ್ಕೆ ಸುಖವಾಗಿರುವಂತೆ ಕಂಡರೂ ಒಳಗಿರುವ ಕಷ್ಟ ಯಾರಿಗೂ ತಿಳಿಯದು 'ದೂರದ ಬೆಟ್ಟ ನುಣ್ಣಗಿದ್ದಂತೆ'. ಆದ್ದರಿಂದ ಹಳ್ಳಿಯ ಜೀವನವೇ ಸರಿ. ಹಳ್ಳಿಗಳಲ್ಲಿ ಸುಖ, ಶಾಂತಿ, ನೆಮ್ಮದಿ ಇರುತ್ತದೆ. ಯಾವುದೇ ಗಲಭೆ ಇಲ್ಲದೆ, ಯಾರ ಅಡಿಯಾಳಾಗದೆ ತಾನೇ ರಾಜನಾಗಿ ದುಡಿದು ಬಂದಂತಹ ಹಣದಿಂದ ನೆಮ್ಮದಿ ಜೀವನವನ್ನು

---

೧. ಕುವೆಂಪು, ಹಾಳೂರು, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೬, ಪು. ೪.

ಸಾಗಿಸಬಹುದು. ಹಳ್ಳಿಯ ಜನರು ದಿನವಿಡೀ ಬೆವರು ಸುರಿಸಿ ದುಡಿಯುವುದರಿಂದ ಅವರಲ್ಲಿ ಸೋಮಾರಿತನ, ಗರ್ವತನವಿಲ್ಲ. ಆದ್ದರಿಂದಲೇ ಹಳ್ಳಿಯವರು ಪಟ್ಟಣದ ಜೀವನಕ್ಕೆ ಮರುಳಾಗಬೇಡಿ ಅವರನ್ನು ಅನುಸರಿಸಬೇಡಿ ಹಳ್ಳಿಯನ್ನು ಉಳಿಸಿ-ಬೆಳೆಸಿ ಎಂದು ಕವಿ ಈ ಮೂಲಕ ಬೇಡಿಕೊಳ್ಳುತ್ತಿದ್ದಾರೆ.

"ಹಳ್ಳಿಗನೆ, ಪುರದವನ ಅನುಸರಿಸಬೇಡ!
ಹಳ್ಳಿಯೇ ಸ್ವರ್ಗವೈ, ಆದ ಬಿಡಲುಬೇಡ!
ಹಳ್ಳಿಯೊಳಗಿಹವು ಸುಖ ಶಾಂತಿ ವಿಶ್ರಾಂತಿ,
ಹಳ್ಳಿಯೊಳಗಿಲ್ಲ ಪುರದಾ ಹೆಮ್ಮೆ ಭ್ರಾಂತಿ!"[೧]

ಹಿಂದೆಯೆಲ್ಲಾ ಮಠ-ಮಂದಿರಗಳಲ್ಲಿ ಓದುತ್ತಿದ್ದರು. ಹಳ್ಳಿಯ ಶಾಲೆಗಳಲ್ಲಿ ವಿದ್ಯಾಭ್ಯಾಸವನ್ನು ಮಾಡುತ್ತಿದ್ದರು. ಆದರೆ ಇಂದು ನಗರದಲ್ಲಿರುವ ಶಾಲಾ-ಕಾಲೇಜುಗಳನ್ನು ಸೇರಲು ಬಯಸಿ ಬಡತನವಿದ್ದರೂ ಕೂಡ ತಮ್ಮ ಮಕ್ಕಳ ವಿದ್ಯಾಭ್ಯಾಸಕ್ಕೆಂದು ಇರುವಂತಹ ತಮ್ಮ ಮನೆ-ಮಠಗಳನ್ನು ಮಾರುವಂತಹ ಪರಿಸ್ಥಿತಿ ಬಂದೊದಗಿದೆ. ತದನಂತರ ಇಲ್ಲಿಂದ ಹೋಗಿ ನಗರಗಳಲ್ಲಿ ವಿದ್ಯಾಭ್ಯಾಸ ಮಾಡಿದವರೆ ಹಳ್ಳಿಗಳನ್ನು ಶೋಷಣೆ ಮಾಡುವ ಪರಿಸ್ಥಿತಿ ಉಂಟಾಗಿದೆ.

ಅದಕ್ಕೆ ತಕ್ಕಂತೆ ಇಲ್ಲಿ ಕವಿಯು ಈ ಕವನದಲ್ಲಿ ಸಿದ್ದಣ್ಣ ಎಂಬ ಮುಗ್ಧರು ಹಳ್ಳಿಯನ್ನು ತೊರೆದು ಪಟ್ಟಣ ಸೇರಿ ಸಾಲ, ಕಳ್ಳತನವನ್ನೆಲ್ಲ ಮಾಡಿ ಜೈಲನ್ನು ಸೇರುವ ಪರಿಸ್ಥಿತಿ ಬಂತು ಎಂದು ಹೇಳುವುದರ ಮೂಲಕ ಹಳ್ಳಿಯ ಸರಳ ಜೀವನವನ್ನು ಅದರ ಮಹತ್ವವನ್ನು ತಿಳಿಸುವುದರ ಜೊತೆಗೆ ನಗರ ಪಟ್ಟಣಗಳಿಂದ ಆಗುತ್ತಿರುವ ಅನಾಹುತಗಳನ್ನು ಕೂಡ ತಿಳಿಸುತ್ತಿದ್ದಾರೆ.

"ಹಳ್ಳಿಯಿಲ್ಲದ ದೇಶವದು ನಿತ್ಯ ರೋಗಿ,
ಕೊಳೆಯುವದು ನಿರ್ಜೀವ ಶವದಂತೆಯಾಗಿ
ಹಳ್ಳಿಗಳಿರುವ ದೇಶವದು ಸದಾ ಭೋಗಿ
ಅದೆ ಎಂದಿಗಾನಂದದಿಂದಿರುವ ಯೋಗಿ!
ಅಮ್ಮ, ಭಾರತಿ, ಹಳ್ಳಿ ಹಾಳಾಗದಿರಲಿ!
ನಿನಗೆಂದು ಸುಖ ಶಾಂತಿಯಾನಂದವಿರಲಿ!
ಹಳ್ಳಿಗಳ ಮಾತಾಯಿ, ಭಾರತಿಯೆ ಅಮ್ಮಾ,
ಹಳ್ಳಿಗಳು ಹಾಳಾಗದಂತೆ ಸಲಹಮ್ಮಾ!"[೨]

---

೧. ಕುವೆಂಪು, ಹಾಳೂರು, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೬, ಪು. ೭.

೨. ಅದೇ., ಪು. ೨೨-೨೩.

ಎಂದು ಕವಿ ಹಳ್ಳಿಗಳ ಜೀವನದ ಬಗ್ಗೆ ವಿವರಿಸುತ್ತ ಹಳ್ಳಿಗಳನ್ನು ಸಲಹುವಂತೆ, ಹಳ್ಳಿಗಳು ಹಾಳಾಗದಂತೆ ಸದಾ ಕಾಲ ಸುಖಶಾಂತಿ ನೆಮ್ಮದಿಯಿಂದಿರಲು ಅದು ಅಳಿಯದಂತೆ ಕಾಪಾಡೆಂದು ಭಾರತಾಂಬೆಯನ್ನು ಕವಿ ಈ ಮೂಲಕ ಬೇಡಿಕೊಳ್ಳುತ್ತಿದ್ದಾರೆ.

ಈ 'ಹಾಳೂರು' ಕವಿತೆಯನ್ನು ಓದಿದ ಸಂದರ್ಭದಲ್ಲಿ ಈ ಕವನವು ಮಕ್ಕಳ ಸಾಹಿತ್ಯಕ್ಕೆ ಒಳಪಟ್ಟಿದ್ದರೂ ಕೂಡ ಇದು ಹೆಚ್ಚಾಗಿ ಅನ್ವಯಿಸುವುದು ಮಕ್ಕಳಿಗಲ್ಲ ದೊಡ್ಡವರಿಗೆಂದು ಹೇಳಬಹುದು. ಏಕೆಂದರೆ, ಈ ಹಳ್ಳಿ ನಗರಗಳ ಪರಿಸ್ಥಿತಿಯನ್ನು, ಅದರ ವ್ಯತ್ಯಾಸವನ್ನು ಮಕ್ಕಳ ಮುಗ್ಧ ಮನಸ್ಸು ಇಂತಹ ವಿಷಯಗಳನ್ನು ಅರಿತುಕೊಳ್ಳಲು ಪರಿಪಕ್ವವಾಗಿರುವುದಿಲ್ಲ. ಆದ್ದರಿಂದ ಈ ಕವನವು ಮಕ್ಕಳು ತಿಳಿದುಕೊಳ್ಳುವುದರ ಜೊತೆಗೆ ಹಿರಿಯರು ತಿಳಿದುಕೊಂಡರೆ ಒಳ್ಳೆಯದೆಂಬುದು ನನ್ನ ಅಭಿಪ್ರಾಯವಾಗಿದೆ.

ಮಕ್ಕಳಿಗೆ ಮೊದಲಿನಿಂದಲೂ ಪ್ರಾಣಿ-ಪಕ್ಷಿಗಳೆಂದರೆ, ಅವುಗಳ ಕಥೆಗಳೆಂದರೆ ಕೇಳುವುದರಲ್ಲಿ ಹೆಚ್ಚು ಆಸಕ್ತಿ ತೋರಿಸುತ್ತಾರೆ. ಅದಕ್ಕೆ ತಕ್ಕಂತೆ ಕುವೆಂಪುರವರು ಮಕ್ಕಳಿಗೋಸ್ಕರ ಮಕ್ಕಳ ಸಾಹಿತ್ಯದಲ್ಲಿ 'ನರಿಗಳಿಗೇಕೆ ಕೋಡಿಲ್ಲ' ಎಂಬ ಕೃತಿಯನ್ನು ರಚಿಸಿದ್ದಾರೆ.

ಈ ಕಥೆಯಲ್ಲಿ ಗುಬ್ಬಕ್ಕ ಎಂಬ ಹೆಣ್ಣು ಗುಬ್ಬಚ್ಚಿ, ಗುಬ್ಬಣ್ಣ ಎಂಬ ಗಂಡು ಗುಬ್ಬಚ್ಚಿಯು ಒಂದು ಹೆಮ್ಮರದ ನೆತ್ತಿಯ ಕೊಂಬೆಯ ತುದಿಯಲ್ಲಿ ಗೂಡನ್ನು ಕಟ್ಟಿಕೊಂಡು ತನ್ನ ಮಕ್ಕಳಾದ ಗಂಡು-ಹೆಣ್ಣು ಗುಬ್ಬಚ್ಚಿಗಳ ಜೊತೆ ಸಂತೋಷದಿಂದ ಜೀವನವನ್ನು ಸಾಗಿಸುತ್ತಿರುತ್ತಾರೆ.

ಇವರ ಮನೆಗೆ ಬೆಲ್ಲದ ಗೋಡೆ, ಸಕ್ಕರೆ ಬಾಗಿಲು, ಕಬ್ಬಿನ ಮುಚ್ಚಿಗೆ ಇದ್ದು ಒಂದು ಪುಟ್ಟ ಸರೋವರವಿತ್ತು. ಆದರೆ ಆ ಸರೋವರದಲ್ಲಿ ನೀರಿನ ಬದಲು ಜೇನುತುಪ್ಪವಿತ್ತು. ಇಷ್ಟು ಸಂತೋಷದಿಂದ ಇದ್ದ ಈ ದಂಪತಿಗಳಿಗೆ ಮೊದಲು ಮಕ್ಕಳಿರಲಿಲ್ಲ. ಅದಕ್ಕೆ ಗುಬ್ಬಣ್ಣ ದೇವರಲ್ಲಿ ಹರಕೆ ಮಾಡಿಕೊಂಡ ಮೇಲೆಯೇ ಮೂರು ಮಕ್ಕಳಾದರು. ಅದಕ್ಕಾಗಿ ಗುಬ್ಬಣ್ಣ ಆ ಹರಕೆ ತೀರಿಸಲು ಕಾಶಿಗೆ ತೆರಳುತ್ತಾನೆ. ಆ ಸಂದರ್ಭದಲ್ಲಿ ಗುಬ್ಬಕ್ಕಳೊಬ್ಬಳೆ ಮಕ್ಕಳನ್ನು ನೋಡಿಕೊಂಡು ಸಂಸಾರದ ಜವಾಬ್ದಾರಿಯನ್ನು ಹೊತ್ತು ಅದನ್ನು ಸರಾಗವಾಗಿ ನಡೆಸಿಕೊಂಡು ಬರುತ್ತಿದ್ದಳು.

ಹೀಗಿರಲು ಒಂದು ದಿನ ರಾತ್ರಿ ಜೋರಾಗಿ ಬಂದಂತಹ ಮಳೆಗೆ, ಸಿಡಿಲು, ಗುಡುಗು, ಬಿರುಗಾಳಿಗೆ ತನ್ನ ಮನೆ ಏನಾಗುವುದೆಂದೋ ಎಂಬ ಚಿಂತೆಯಲ್ಲಿ ತೊಟ್ಟಿಲಲ್ಲಿ ಇದ್ದ ಮಕ್ಕಳನ್ನು ತೂಗುತ್ತಿರುತ್ತಾಳೆ. ಅದೇ ಸಂದರ್ಭದಲ್ಲಿ ಮಳೆಗೆ ಸಿಕ್ಕಿಹಾಕಿಕೊಂಡಿದ್ದ 'ಹುಲಿಯಣ್ಣ, ಕರಡ್ಯಣ್ಣ, ನರಿಯಣ್ಣ' ಎಂಬ ಮೂವರು ಪ್ರಯಾಣಿಕರಿಗೆ ಆ ಪುಟ್ಟ ಮನೆಯಲ್ಲಿ ಆಶ್ರಯವನ್ನು ನೀಡುತ್ತಾಳೆ.

ಆಶ್ರಯವನ್ನು ನೀಡುವುದರ ಜೊತೆಗೆ ಅವರನ್ನು ಆದರವಾಗಿ ಸತ್ಕರಿಸುತ್ತಾಳೆ. ಆಶ್ರಯ ಪಡೆದ ಗುಬ್ಬಕ್ಕನ ಮನೆಯಲ್ಲಿದ್ದ ಬೆಲ್ಲದ ಗೋಡೆಯ ಮೇಲೆ ತಗುಲಿಹಾಕಿದ್ದ 'ಮಹಾತ್ಮಗಾಂಧಿ, ಶ್ರೀ ರಾಮಕೃಷ್ಣ, ವಿವೇಕಾನಂದರ' ಪಟಗಳನ್ನು ನೋಡಿ "ಇವೇಕೆ ಈ ಪಟಗಳು" ಎಂದು ಕೇಳುತ್ತಾನೆ ಕರಡ್ಯಣ್ಣ.

ಅದಕ್ಕೆ ಗುಬ್ಬಕ್ಕನು: "ಮಕ್ಕಳು ಈ ಮಹಾಪುರುಷರ ಸನ್ನಿಧಿಯಲ್ಲಿಯೇ ಬೆಳೆದರೆ ಅವರೂ ಮಹಾತ್ಮರಾಗುತ್ತಾರೆ. ಭರತಮಾತೆಯ ಉದ್ಧಾರ ಮಾಡುತ್ತಾರೆ. ಅದಕ್ಕೋಸ್ಕರ ಈ ಪಟಗಳನ್ನು ಇಟ್ಟಿದ್ದೇನೆ. ಅವರಿಗೆ ದಿನವೂ ಅವರ ಕಥೆಗಳನ್ನು ಜೋಗುಳದಂತೆ ಹೇಳುತ್ತೇನೆ. ಹಾಲು, ಬೆಣ್ಣೆಗಳಲ್ಲಿ ಅವರ ಮಹಿಮೆಯನ್ನು ಊಡುತ್ತೇನೆ"[೧] ಎನ್ನುತ್ತಾಳೆ ಗುಬ್ಬಕ್ಕ.

ಆಶ್ರಯನೀಡಿ ಉಪಕಾರ ಮಾಡಿದ ಗುಬ್ಬಕ್ಕನಿಗೆ ತನ್ನ ನರಿಬುದ್ಧಿಯನ್ನು ತೋರಿಸಿದ ನರಿಯಣ್ಣ ಗುಬ್ಬಕ್ಕನ ಮೂರು ಮಕ್ಕಳನ್ನು ನುಂಗಿಕೊಳ್ಳುವುದರ ಮೂಲಕ ಅಪಕಾರವೆಸಗುತ್ತಾನೆ.

ಆದರೂ ಗುಬ್ಬಕ್ಕ ಕೊನೆಯಲ್ಲಿ ತನಗೆ ಅಪಕಾರ ಮಾಡಿದ ನರಿಯಣ್ಣನ ಮೇಲೆ ಕರುಣೆ ತೋರಿಸುವುದರ ಜೊತೆಗೆ ಒಂದು ಉಪಾಯದ ಮೂಲಕ ತನ್ನ ಮಕ್ಕಳನ್ನು ಮತ್ತೆ ಪಡೆದುಕೊಳ್ಳುತ್ತಾಳೆ. ನರಿಯಣ್ಣ ಮಾಡಿದ ಶಿಕ್ಷೆಗೆ ಹುಲಿಯಣ್ಣನು ನರಿಯಣ್ಣನಿಗಿದ್ದ ಎರಡು ಕೋಡುಗಳನ್ನು ಮುರಿದನು. ಹಾಗೆಯೇ, "ಇನ್ನು ಮೇಲೆ ನಿನ್ನ ಜಾತಿಗೆ ಕೋಡುಗಳಿರದೆ ಹೋಗಲಿ" ಎಂದು ಶಾಪಕೊಟ್ಟನು. ಅಂದಿನಿಂದ ನರಿಗಳ ಜಾತಿಗೆ ಕೋಡುಗಳಿಲ್ಲ!.

ಈ ಕಥೆಗಳ ಮೂಲಕ ಮಕ್ಕಳಿಗೆ ನೀತಿಯ ಅಂಶಗಳನ್ನು ತಿಳಿಸುತ್ತಿದ್ದಾರೆ. ಇಂತಹ ಪ್ರಾಣಿ–ಪಕ್ಷಿಗಳ ಮೂಲಕ ಮಕ್ಕಳಿಗೆ ನೀತಿಪಾಠಗಳನ್ನು ಹೇಳಿದರೆ ಮಕ್ಕಳ ಮನಸ್ಸಿಗೆ ಆಳವಾಗಿ ಬೇರೂರತ್ತವೆ. ಆದ್ದರಿಂದ ಕುವೆಂಪು ಈ ಕಥೆಗಳ ಮೂಲಕ ಮಕ್ಕಳ ಮನಸ್ಸನ್ನು ಆಕರ್ಷಿಸಿದ್ದಾರೆ.

'ಶಿಶುಗೀತಾಂಜಲಿ' ಎನ್ನುವ ಹೆಸರಿನಲ್ಲಿ ಪ್ರಕಟವಾಗಿರುವುದನ್ನು ನೋಡುವುದಾದರೆ, ಇದರಲ್ಲಿ ಮುಖ್ಯವಾಗಿ 'ನನ್ನ ಮನೆ, ಮರಿವಿಜ್ಞಾನಿ, ಮೇಘಪುರ' ಎಂಬ ಕವನಗಳನ್ನು ಒಳಗೊಂಡಿದೆ. ಇದರಲ್ಲಿ ಬರುವಂತಹ ಪ್ರತಿಯೊಂದು ಕವನಗಳು ರಾಗ, ಲಯ, ಪ್ರಾಸಬದ್ಧವಾಗಿದ್ದು ಮಕ್ಕಳ ಮನಸ್ಸಿಗೆ ಹೆಚ್ಚು ಹಿತವೆನಿಸುತ್ತದೆ. ಆದ್ದರಿಂದ ಕುವೆಂಪುರವರ ಶಿಶುಗೀತಾಂಜಲಿ, ಮಕ್ಕಳ ಸಾಹಿತ್ಯಕ್ಕೆ ಒಂದು ಕೊಡುಗೆ ಎಂದು ಹೇಳಬಹುದು.

---

೧. ಕುವೆಂಪು, ನರಿಗಳಿಗೇಕೆ ಕೋಡಿಲ್ಲ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೬೭, ಪು. ೫.

"ಕಡಲಿನ ರಾಶಿಯ ಸೇರಲು ಹೋಗುವ
ಗಗನದ ಯಾತ್ರಿಕರೇನಮ್ಮಾ?
ಸೃಷ್ಟಿ ರಹಸ್ಯವನರಿಯಲು ತಿರುಗುವ
ವಿಶ್ವದ ಕಬ್ಬಿಗರೇನಮ್ಮಾ?"[೧]

ಪ್ರಕೃತಿಯನ್ನು ಪರಿಚಯಿಸುವ 'ಮೂರ್ತಿಯ ಬೆಳ್ಮುಗಿಲು' ಕವನದಲ್ಲಿ ಕಡಲು, ಗಗನ, ಯಾತ್ರಿಕ, ಕಬ್ಬಿಗ – ಇದರೆಲ್ಲದರ ಪರಿಚಯವನ್ನು ಮಕ್ಕಳಿಗೆ ಕುವೆಂಪು ಮಾಡಿಕೊಡುತ್ತಿದ್ದಾರೆ.

'ಕನ್ನಡ' ಎಂಬ ಇಲ್ಲಿನ ಕವನದಲ್ಲಿ ಪುಟ್ಟ ಮಕ್ಕಳ ಮನಸ್ಸಿನಲ್ಲಿ ಕನ್ನಡ ಭಾಷೆಯ ಬಗ್ಗೆ ಅಭಿಮಾನವನ್ನು ಬೆಳೆಸುತ್ತದೆ.

"ಕನ್ನಡ ಎನೆ ಕುಣಿದಾಡುವುದೆನ್ನೆದೆ
ಕನ್ನಡ ಎನೆ ಕಿವಿ ನಿಮಿರುವುದು"[೨]

'ಗುರು' ಎಂಬ ಕವಿತೆಯಲ್ಲಿ 'ಸಂಪಿಗೆ' ಹೂವನ್ನು 'ತಂಪಿಗೆ' ಎನ್ನುವುದು. ಮೂರ್ತಿಗೆ ಸಂಪಿಗೆ ಎಂಬ ಹೆಸರು ಇಷ್ಟವಾಗದೆ ಅವನ ತಾಯಿ ಮತ್ತು ತಂಗಿ 'ತಂಪಿಗೆ' ಎಂದು ಕರೆಯಲು ಒಪ್ಪುವುದು.

"ಆಗಲಿ! ನಾನೂ ತಂಪಿಗೆ ಎಂಬೆನು,
ನನಗೂ ತಂಗಿಗೂ ನೀನೆ ಗುರು!"[೩]

ಎಂದು ತಾಯಿ ತನ್ನ ಮಗನ ಸಮಾಧಾನಕ್ಕೋಸ್ಕರ 'ತಂಪಿಗೆ' ಎಂದು ಒಪ್ಪಿಕೊಳ್ಳುವುದು.

'ತಿಂಡಿ' ಎಂಬ ಕವಿತೆಯಲ್ಲಿ ತನಗೆ ತಿಂಡಿಕೊಟ್ಟರೆ ತಾನು ಏನುಬೇಕಾದರೂ ಮಾಡುವುದಾಗಿ ಮಗು ಹೇಳುತ್ತದೆ. ತಿಂಡಿ ಕೊಟ್ಟರೆ ಚಂದಿರನನ್ನು ತನ್ನ ತಾಯಿಯ ಮಾಂಗಲ್ಯದಲ್ಲಿ ಕೂಡಿಸುವುದಾಗಿಯೂ ತಾರೆಗಳನ್ನು ಮಣಿಗಳ ಹಾರ ಮಾಡುವುದಾಗಿಯೂ, ವೈಕುಂಠ, ಕೈಲಾಸ ಬೇಕಾದರೂ ತರುವುದಾಗಿಯೂ ಮಗು ತನ್ನ ಸಾಹಸವನ್ನು ಪ್ರದರ್ಶನ ಮಾಡುವುದನ್ನು ಈ ಕವನ ತಿಳಿಸುತ್ತದೆ.

'ತೊರೆಯ ಬಳಿ' ಎನ್ನುವ ಕವಿತೆಯಲ್ಲಿ ಮಗು ಹರಿಯುತ್ತಿರುವ ತೊರೆಯನ್ನು ನೋಡುತ್ತ

---

೧. ಕುವೆಂಪು, ಶಿಶು ಗೀತಾಂಜಲಿ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೪೬, ಪು. ೨೧.
೨. ಅದೇ., ಪು. ೫.
೩. ಅದೇ., ಪು. ೯.

"ಎಲ್ಲಿಂದ ನೀ ಬರುವೆ?
ಎಲ್ಲಿಗೋಡುತಲಿರುವೆ?
ಆರನೀ ಪರಿ ಕರಿವೆ?
ಏಕಿಂತು ಕರೆವೆ? – ಓ ಮುದ್ದು ತೊರೆಯೆ!"[೧]

ಎಂದು ಮಗುವು ತೊರೆಯನ್ನು ನೋಡಿ ನಾನೂ ನಿನ್ನ ಹಾಗೆ ನಿನ್ನಲ್ಲಿ ಹಾಡಿ ಒಂದಾಗುತ್ತೇನೆ. ನಾನು ನಿನ್ನನ್ನು ಮರೆಯುವುದಿಲ್ಲ ಎಂದು ತೊರೆಯ ಜೊತೆ ಮಾತನಾಡುತ್ತದೆ.

ತಂಗಿಗಿಂತ ತಾನು ಬುದ್ಧಿವಂತನೆಂದು ಭಾವಿಸಿಕೊಂಡು ತನ್ನ ತಾಯಿಯ ಹತ್ತಿರ ತಂಗಿಯ ಬಗ್ಗೆ ದೂರು ಹೇಳುವುದು. ತುಂಟಿ ಎಂದರೆ ಅಳುವುದು ಬಿಟ್ಟು ನಗುತ್ತಾಳೆ. ಬಿಸ್ಕತ್ತು ಎನ್ನುವುದಕ್ಕೆ ಬಿಕ್ಕತ್ತು ಎನ್ನುತ್ತಾಳೆ. ಹೀಗೆ ಇನ್ನು ಅನೇಕ ದೂರುಗಳನ್ನು ಹೇಳುತ್ತಾನೆ. ಇಂತಹ ಮಾತುಗಳನ್ನು 'ಹಿರೇತನ' ಎಂಬ ಕವನದಲ್ಲಿ ಕೇಳಬಹುದು.

ಇದೇ ರೀತಿಯಾಗಿ 'ತಿಂಗಳ್‌ಮಾವ', 'ಅರ್ಧಚಂದ್ರ', 'ಮೂರ್ತಿಯ ಬೆಳ್ಮಗಿಲು', 'ಹೇರಾಸೆ' ಕವನಗಳಲ್ಲೂ ಕೂಡ ಕಾಣಬಹುದಾಗಿದೆ. ಇಷ್ಟೇ ಅಲ್ಲದೆ ಇನ್ನು ಅನೇಕ ಕವನಗಳನ್ನು ಕುವೆಂಪು ಪರಿಚಯಿಸಿದ್ದಾರೆ.

ಕುವೆಂಪು ಅವರ ಮಕ್ಕಳ ನಾಟಕವನ್ನು ನೋಡುವುದಾದರೆ ಮುಖ್ಯವಾಗಿ 'ನನ್ನ ಗೋಪಾಲ' ಮತ್ತು 'ಮೋಡಣ್ಣನ ತಮ್ಮ' ಎಂಬೆರಡು ನಾಟಕಗಳನ್ನು ಕಾಣಬಹುದು.

ಮೊದಲು 'ನನ್ನ ಗೋಪಾಲ' ನಾಟಕದಲ್ಲಿ ತಾಯಿಯ ದೈವಭಕ್ತಿ ಹಾಗೂ ಮಗನ ಮುಗ್ಧ ಮನಸ್ಸನ್ನು ತೋರಿಸಲಾಗಿದೆ. ವಿಧವೆಯಾದ ಬಡ ಹೆಂಗಸೊಬ್ಬಳು ವೇಣುಗೋಪಾಲನ ಪರಮಭಕ್ತೆಯಾಗಿ ನೂಲು ಮಾರಿ ಬಂದ ಹಣದಿಂದ ಬಡತನದ ಜೀವನವನ್ನು ನಡೆಸುತ್ತಿರುತ್ತಾಳೆ. ತನ್ನ ಉಸಿರಾದ ಕಂದ ಗೋಪಾಲನಿಗೆ ಕಷ್ಟ ತಿಳಿಯದ ಹಾಗೆ ವಿದ್ಯಾವಂತನ್ನಾಗಿ ಮಾಡುವುದು ಅವಳ ಆಸೆಯಾಗಿರುತ್ತದೆ. ಅದಕ್ಕೆಂದೆ ಪಕ್ಕದ ಹಳ್ಳಿಯ ಶಾಲೆಗೆ ಕಳುಹಿಸುತ್ತಿರುತ್ತಾಳೆ. ಆದರೆ, ಕಾಡು ಮಧ್ಯದ ದಾರಿ ಆಗಿದ್ದರಿಂದ ಗೋಪಾಲನು ಒಬ್ಬನೆ ಹೋಗಲು ಹೆದರಿಕೆಯಾಗುತ್ತದೆ ಎಂದು ತಾಯಿ ಬಳಿ ಹೇಳಿದಾಗ ಆಕೆ ಆತನಲ್ಲಿ ಧೈರ್ಯ ತುಂಬಲು ಹೀಗೆ ಹೇಳುತ್ತಾರೆ. "ನೀನು ಶಾಲೆಯಿಂದ ಬರುವಾಗ ಕಾಡಿನಲ್ಲಿ ಹೆದರಿಕೆಯಾದರೆ ಗೋಪಾಲನನ್ನು ಕೂಗು, ಬರುತ್ತಾನೆ" ಎಂದು ಹೇಳಿದಾಗ

**ಬಾಲಕ:** "ಯಾರಮ್ಮ ಅವನು?" ಎಂದು ಪ್ರಶ್ನಿಸುತ್ತಾನೆ. ಆಗ ತಾಯಿ.....

---

೧. ಕುವೆಂಪು, ಮೇಘಪುರ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೪೭, ಪು. ೫.

**ತಾಯಿ:** "ನಿನ್ನಣ್ಣ ನನ್ನ ಹಿರಿಯ ಮಗ. ಕಾಡಿನಲ್ಲಿ ಅವನು ಯಾವಾಗಲೂ ದನ ಕಾಯುತ್ತಾ ಇರುತ್ತಾನೆ. ನೀನು ಕರೆದರೆ ಬಂದು ನಿನ್ನನ್ನು ಕಾಡು ದಾಟಿಸುತ್ತಾನೆ"[೧] ಎಂದು ಹೇಳುತ್ತಾಳೆ.

ತನ್ನ ತಾಯಿಯ ಮಾತನ್ನು ನಂಬಿದಂತಹ ಗೋಪಾಲನಿಗೆ ದಾರಿ ಮಧ್ಯೆಯಲ್ಲಿ ಹೆದರಿಕೆಯಾದಾಗ ತಾಯಿಯ ಮಾತು ನೆನಪಾಗಿ "ಅಣ್ಣಾ ಗೋಪಾಲಣ್ಣಾ' ಎಂದು ಕೂಗಿಕೊಳ್ಳುತ್ತಾನೆ. ಬನದ ಗೋಪಾಲ ಬಾಲಕನ ಕೂಗಿಗೆ ಓಗೊಟ್ಟು ಧೈರ್ಯವಾಗಿ ನಡೆದು ಹೋಗುವಂತೆ ಹೇಳುತ್ತಾನೆ. ಈ ವಿಷಯವನ್ನು ಮಗನಿಂದ ತಿಳಿದ ತಾಯಿಯು ಸಂತೋಷಪಟ್ಟು ಮಗನ ಅದೃಷ್ಟಕ್ಕಾಗಿ ಹಿಗ್ಗುತ್ತಾಳೆ..... "ಪುಣ್ಯವಂತನು ನೀನು, ಮಗನೆ. ನಿನ್ನನ್ನು ಹೆತ್ತವಳು ನಾನೂ ಧನ್ಯಳಾದೆ. ನನ್ನ ಬಡತನವಿಂದು ಮರೆಯಾಯ್ತು. ನನ್ನ ವೈಧವ್ಯವಿಂದು ಅಳಿದುಹೋಯ್ತು. ಇನ್ನೆನ್ನ ಭಾಗ್ಯಕ್ಕೆ ಎಣೆಯಿಲ್ಲ"[೨] ಎಂದು ಸಂತೋಷಪಡುತ್ತಾಳೆ.

ಮಾರನೆಯ ದಿನ ಬನದ ಗೋಪಾಲನಿಗಾಗಿ ತಾಯಿ ಮಗ ಗೋಪಾಲನ ಬಳಿ ಕಳುಹಿಸಿದಾಗ ಬನದ ಗೋಪಾಲನನ್ನು ಎದುರಿಗೆ ಬರುವಂತೆ ಒತ್ತಾಯಿಸುತ್ತಾನೆ. ವಿಧಿಯಿಲ್ಲದೆ ಅವನ ಒತ್ತಾಯಕ್ಕೆ ಮಣಿದು ಬರುತ್ತಾನೆ. ಈ ವಿಷಯ ತಿಳಿದ ತಾಯಿ ತುಂಬಾ ಹಿಗ್ಗಿ ಸಂತೋಷಪಡುತ್ತಾಳೆ.

ಶಾಲೆಯಲ್ಲಿ ಗುರುಗಳಿಗೆ ಗುರುದಕ್ಷಿಣೆ ಕೊಡುವ ಸಂದರ್ಭ ಬಂದಾಗ ಬನದ ಗೋಪಾಲ ಕೊಟ್ಟಂತಹ ಸಣ್ಣ ಮಣ್ಣಿನ ಕುಡಿಕೆಯ ಮೊಸರನ್ನು ಗುರುಗಳಿಗೆ ಕಾಣಿಕೆಯಾಗಿ ಕೊಟ್ಟಾಗ ಅದನ್ನು ಎಷ್ಟೇ ಸುರಿದರೂ ಅಕ್ಷಯವಾಗುವುದನ್ನು ಕಂಡಂತಹ ಗುರು ಅಚ್ಚರಿಗೊಂಡು ಅದರ ಬಗ್ಗೆ ವಿಚಾರಿಸಿ ಬನದ ಗೋಪಾಲನ ಬಗ್ಗೆ ತಿಳಿದು ಆತನನ್ನು ನೋಡಬೇಕೆಂದು ಗೋಪಾಲನ ಜೊತೆ ಬಂದಾಗ ಗುರುಗಳು ನಿನ್ನನ್ನು ನೋಡಬೇಕಂತೆ ಇಲ್ಲಿ ಬಾ ಅಣ್ಣ ಎಂದು ಕರೆದರು ಕಾಣಿಸಿಕೊಳ್ಳುವುದಿಲ್ಲ. ಅದಕ್ಕೆ ಬದಲಾಗಿ "ನನ್ನನ್ನು ನೋಡುವ ಕಾಲ ಅವರಿಗಿನ್ನೂ ಬಂದಿಲ್ಲ. ಅವರಿನ್ನು ಬಹುಕಾಲ ಕಾಯಬೇಕು"[೩] ಎಂದು ಉತ್ತರ ಬರುತ್ತದೆ. ಅದಕ್ಕೆ ಬೇಸರಗೊಳ್ಳದ ಗುರುಗಳು ತನ್ನ ಶಿಷ್ಯ ಗೋಪಾಲನಲ್ಲೇ ದೇವರನ್ನು ಕಾಣುತ್ತಾರೆ.

---

೧. ದೇ.ಜ.ಗೌ., ಜಿ.ಎಸ್.ಶಿವರುದ್ರಪ್ಪ, ಪ್ರಧಾನ್ ಗುರುದತ್ತ, ಕುವೆಂಪು ಸಂಚಯ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೦೯, ಪು. ೩೮೦.

೨. ಅದೇ., ಪು. ೩೮೩.

೩. ಅದೇ., ಪು. ೩೯೯.

ಹೀಗೆ ದೇವರು ಮುಗ್ಧ ಮನಸ್ಸು, ನಿಷ್ಕಲ್ಮಷ ಭಕ್ತಿಗೆ ಒಲಿಯುತ್ತಾನೆ ಎಂಬುದನ್ನು ಕುವೆಂಪು ಮುಗ್ಧ ಬಾಲಕ ಮತ್ತು ಗುರುಗಳ ಮೂಲಕ ತೋರಿಸಿಕೊಟ್ಟಿದ್ದಾರೆ.

ಎರಡನೆಯ ನಾಟಕವಾದ 'ಮೋಡಣ್ಣನ ತಮ್ಮ'. ಇದರಲ್ಲಿ ಪ್ರಕೃತಿ ಪ್ರಿಯನಾದ ಒಬ್ಬ ಬಾಲಕನಿದ್ದು ಚಲಿಸುತ್ತಿರುವ ಮೋಡವನ್ನು ಕಂಡು ತನ್ನ ಅಣ್ಣನೆಂದು ಭಾವಿಸಿ ಅದರ ಜೊತೆ ಮಾತನಾಡಲು ಪ್ರಾರಂಭಿಸುತ್ತದೆ.

> "ಓ ಮೋಡಣ್ಣಾ, ಓ ಮೋಡಣ್ಣಾ
> ನಾನು ಬರುವೆನೊ ಕೈ ನೀಡಣ್ಣಾ!"[೧]

ಎಂದು ಆತ್ಮೀಯತೆಯಿಂದ ಕೇಳಿಕೊಳ್ಳುತ್ತದೆ. ಆದರೆ, ಮೋಡಣ್ಣ...

> "ಬರಬೇಡಣ್ಣಾ! ಬರಬೇಡಣ್ಣಾ!
> ಅವ್ವನು ಬೈವಳು ನೀ ನೋಡಣ್ಣಾ!"[೨]

ಎಂದು ಮೋಡ ಹೇಳುತ್ತದೆ.

ಅಷ್ಟಕ್ಕೆ ಸುಮ್ಮನಿರದ ಬಾಲಕ ಪಕ್ಕದಲ್ಲೇ ಇದ್ದಂತಹ ಗಿರಿಯಣ್ಣನ ಹತ್ತಿರ ಸಹಾಯ ಕೇಳುತ್ತಾನೆ. ಗಿರಿಯಣ್ಣನ ಮಾತನ್ನು ಕೇಳದ ಮೋಡಣ್ಣನ ಕಂಡು ನಂತರ ಕಾಡಣ್ಣನ ಸಹಾಯವನ್ನು ಬಾಲಕ ಕೇಳಿದಾಗ ಮನುಷ್ಯರಿಂದ ಕಾಡಿಗೆ ಆಗುತ್ತಿರುವ ಅನ್ಯಾಯದ ಬಗ್ಗೆ ಬೇಸರ ತಳೆದಿದ್ದ ಕಾಡಣ್ಣ ಆ ಬಾಲಕನನ್ನು ಕರೆದೊಯ್ಯಬೇಡವೆಂದು ಮೋಡಣ್ಣನಿಗೆ ನಿರ್ದಾಕ್ಷಿಣ್ಯವಾಗಿ ಹೇಳಿಬಿಡುತ್ತದೆ.

ತದನಂತರ ಬಾಲಕ ನೇರವಾಗಿ ಮೋಡಣ್ಣನಿಗೆ ಮೊರೆಯಿಟ್ಟಂತಹ ಸಂದರ್ಭದಲ್ಲಿ ಮೋಡಣ್ಣನು ತನ್ನ ಕೆಲಸದ ಒತ್ತಡವನ್ನು ಹೇಳಿ ಜೊತೆಗೆ ಬುದ್ಧಿವಾದವನ್ನು ಹೇಳಿ ಮತ್ತೊಮ್ಮೆ ಬಂದಾಗ ಕರೆದುಕೊಂಡು ಹೋಗುವುದಾಗಿ ಆ ಬಾಲಕನ ಮನಸ್ಸನ್ನು ಒಲಿಸುತ್ತದೆ. ಸಮಾಧಾನಪಡಿಸಿದ ನಂತರ ಮೋಡಣ್ಣ ಮುಂದಕ್ಕೆ ಸರಿಯುತ್ತಾನೆ. ಬಾಲಕ ಮನೆಯೊಳಗೆ ಸರಿಯುತ್ತಾನೆ.

ಈ ರೀತಿಯಾಗಿ ಕುವೆಂಪು ಮಕ್ಕಳಿಗೆ ಇಷ್ಟವಾಗುವ ರೀತಿಯಲ್ಲಿ ಅತೀ ಜಾಣ್ಮೆಯಿಂದ ಕಥೆ, ಕವನ, ನಾಟಕಗಳನ್ನು ಚಿತ್ರಿಸಿದ್ದಾರೆ.

---

೧. ದೇ.ಜ.ಗೌ., ಜಿ.ಎಸ್.ಶಿವರುದ್ರಪ್ಪ, ಪ್ರಧಾನ್ ಗುರುದತ್ತ, ಕುವೆಂಪು ಸಂಚಯ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೦೯, ಪು. ೩೬೭.
೨. ಅದೇ., ಪು. ೩೬೭.

ಈ ಮೇಲಿನ ಎರಡು ನಾಟಕಗಳಲ್ಲಿ ಒಂದರಲ್ಲಿ 'ಭಕ್ತಿ' ಪ್ರಧಾನವಾಗಿದೆ. ಮತ್ತೊಂದರಲ್ಲಿ 'ಪ್ರಕೃತಿ' ಪ್ರಧಾನವಾಗಿದೆ.

ಒಟ್ಟಾರೆಯಾಗಿ ಕನ್ನಡದಲ್ಲಿನ ಮಕ್ಕಳ ಸಾಹಿತ್ಯವು ಅಂದಿನಿಂದ ಅಂದರೆ, ಪಂಜೆ ಮಂಗೇಶರಾಯರು, ಶಿವರಾಮ ಕಾರಂತರಿಂದ ಹಿಡಿದು ಇವರೆಲ್ಲ ಪ್ರೋತ್ಸಾಹಿಸಿದ ಮಕ್ಕಳ ಸಾಹಿತ್ಯವನ್ನು ಕುವೆಂಪು ಅವರು ಮುಂದುವರಿಸಿಕೊಂಡು ಓದುಗರಲ್ಲಿ ಹೆಚ್ಚು ಆಸಕ್ತಿಯನ್ನು ಮೂಡಿಸುವಲ್ಲಿ ಯಶಸ್ವಿಯಾಗಿದ್ದಾರೆ.

## ಅಧ್ಯಾಯ ಮೂರು

# ಕುವೆಂಪು ಅವರ ಮಕ್ಕಳ ಸಾಹಿತ್ಯದಲ್ಲಿ ಮಾನವೀಯ ಮೌಲ್ಯಗಳು

ಮಾನವತಾವಾದಿ ಎಂದೇ ಹೆಸರಾಗಿರುವ ಕುವೆಂಪು ಅವರ ಬದುಕು ಕೂಡ ವಿವಿಧ ಮೌಲ್ಯಗಳನ್ನು ಒಳಗೊಂಡಿತ್ತು. ಬಹುಶಃ ಆ ರೀತಿಯ ವಿಶಿಷ್ಟ ಗುಣಗಳನ್ನು ಹೊಂದಿದ್ದರಿಂದಲೇ ಕುವೆಂಪುರವರು ಇಷ್ಟು ಪ್ರಖ್ಯಾತಿ ಹೊಂದಲು ಸಾಧ್ಯವಾಯಿತು ಎಂದು ಹೇಳಬಹುದು. ಅಂತಹ ಮೌಲ್ಯಗಳಲ್ಲಿ ಒಂದಾದ ಮಾನವೀಯ ಮೌಲ್ಯಗಳ ಬಗ್ಗೆ ತಿಳಿಯುವುದಾದರೆ: 'ಪ್ರೀತಿ, ಪ್ರೇಮ, ವಾತ್ಸಲ್ಯ, ಔದಾರ್ಯ, ಕರುಣೆ, ಶ್ರದ್ಧೆ, ಭಕ್ತಿ, ಕ್ಷಮಾಗುಣ ಇಂತಹ ಹಲವಾರು ಅಂಶಗಳು ಕುವೆಂಪು ಅವರಲ್ಲಿ ಅಡಕವಾಗಿದ್ದು 'ಹಿಂಸೆ, ಅನ್ಯಾಯ, ನೋವು, ದಾರಿದ್ರ್ಯ' ಇವುಗಳಿಂದ ಕೂಡಿದ ಸನ್ನವೇಶಗಳಲ್ಲಿ ಮರುಗುವ ಗುಣವನ್ನು ಕೂಡ ಕುವೆಂಪು ಹೊಂದಿದ್ದರು. ಇಂತಹ ಎಲ್ಲಾ ಮಾನವೀಯ ಮೌಲ್ಯಗಳನ್ನು ಒಟ್ಟಾರೆಯಾಗಿ ನಾವು ಕುವೆಂಪುರವರ ಮಕ್ಕಳ ಸಾಹಿತ್ಯದಲ್ಲಿ ಕಾಣಬಹುದಾಗಿದೆ.

ಈ ಮೇಲಿನ ಮೌಲ್ಯಗಳನ್ನು ಬೆಳೆಯುವ ಮಕ್ಕಳಿಗೆ ಅಳವಡಿಸುವುದರಿಂದ ಮಕ್ಕಳ ಬೆಳವಣಿಗೆಗೆ, ಅವರ ಮುಂದಿನ ಭವಿಷ್ಯಕ್ಕೆ ಸಹಕಾರಿಯಾಗುತ್ತದೆ. ಹಾಗಾಗಿಯೇ ಕುವೆಂಪುರವರು ಮಕ್ಕಳಿಗಾಗಿಯೇ ಬರೆದಂತಹ ಮಕ್ಕಳ ಸಾಹಿತ್ಯದಲ್ಲಿ ಇಂತಹ ಮಾನವೀಯ ಮೌಲ್ಯಗಳನ್ನು ಹುಡುಕುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗುತ್ತಿದೆ.

ಕುವೆಂಪುರವರ ಮಕ್ಕಳ ಸಾಹಿತ್ಯ ಕವನ, ನಾಟಕ, ಕಥೆಗಳೆಂಬ ಪ್ರಕಾರಗಳನ್ನು ಒಳಗೊಂಡಿದ್ದು ಇದು ಕೇವಲ ಮಕ್ಕಳಿಗಷ್ಟೇ ಅಲ್ಲದೆ ಪ್ರತಿಯೊಬ್ಬರು ಕಲಿಯುವಂತಹ ಅನೇಕ ಅಂಶಗಳನ್ನು ಒಳಗೊಂಡಿದೆ. ಕುವೆಂಪುರವರ ಮಕ್ಕಳ ಸಾಹಿತ್ಯವು ಮಕ್ಕಳಿಗೆ ಹೊಸ ಚೈತನ್ಯವನ್ನು ಹುಟ್ಟಿಸುತ್ತದೆ. ಆದ್ದರಿಂದಲೇ ಈ ಸಾಹಿತ್ಯವು ಉನ್ನತ ಸ್ಥಾನವನ್ನು ಪಡೆದುಕೊಂಡಿದೆ.

ಈ ಮಕ್ಕಳ ಸಾಹಿತ್ಯದಲ್ಲಿ ಮುಖ್ಯವಾಗಿ ನಾವು ನೋಡುವುದಾದರೆ, 'ಪ್ರೀತಿ, ಪ್ರೇಮ, ಕರುಣೆ, ಮಮತೆ, ವಾತ್ಸಲ್ಯ, ಅನುಕಂಪ' ಹೀಗೆ ಇವುಗಳೆಲ್ಲದರ ಇನ್ನೊಂದು ಮುಖವೇ 'ತಾಯಿ' ಎಂದು ಹೇಳಬಹುದು. ಏಕೆಂದರೆ ಒಂದು ಮಗು ತನಗೆ ಉಂಟಾದ ಅನುಮಾನ, ಆಶ್ಚರ್ಯ ಯಾವುದೇ ಆಗಲಿ ಅದು ವ್ಯಕ್ತಪಡಿಸುವುದೇ ಮೊದಲು ತನ್ನ ತಾಯಿಯ ಹತ್ತಿರ ಪ್ರಶ್ನೆ ಕೇಳುವ ಮೂಲಕವೇ. ಪ್ರತಿಯೊಂದು ಮಗುವಿಗೂ 'ಮನೆಯೇ ಮೊದಲ ಪಾಠಶಾಲೆ' ಎನ್ನುವಂತೆಯೇ 'ತಾಯಿಯೇ ಮೊದಲ ಗುರು' ಆಗಿರುತ್ತಾಳೆ. ಈ ಮಾತಿಗೆ ನಾವು ಕೂಡ ಏನು ಹೊರತಾಗಿಲ್ಲ ಅಲ್ಲವೇ..... ಹಾಗಾಗಿ ತನ್ನ ತಾಯಿಯನ್ನು ಪ್ರಶ್ನೆ ಕೇಳುವುದರ ಮೂಲಕ

ಉತ್ತರ ತಿಳಿದುಕೊಂಡು ತನ್ನ ಅನುಮಾನವನ್ನು ಪರಿಹರಿಸಿಕೊಳ್ಳುತ್ತದೆ. ಇದಷ್ಟೇ ಅಲ್ಲದೆ ಇಲ್ಲಿ ತಾಯಿ ಮತ್ತು ಮಕ್ಕಳ ನಡುವಿನ ಪ್ರೀತಿ, ಸ್ನೇಹ ಎಂತಹದ್ದು? ಎಂಬುದರ ಜೊತೆಗೆ ಆ ಮುಗ್ಧ ಮಗು ಕೇಳುವ ಪ್ರತಿಯೊಂದು ಪ್ರಶ್ನೆಗಳಿಗೂ ತಾಯಿ ಯಾವ ರೀತಿಯ ಬೇಸರವನ್ನು ವ್ಯಕ್ತಪಡಿಸದೆ ಪ್ರಶ್ನೆಗೆ ತಕ್ಕಂತಹ ಉತ್ತರವನ್ನು ಕೊಡುತ್ತಾಳೆ. ಇಂತಹ ಅನೇಕ ಅಂಶಗಳನ್ನು ಅತೀ ಸರಳವಾಗಿ ತಿಳಯುವುದರ ಮೂಲಕ ಮಕ್ಕಳಿಗೆ ಕುವೆಂಪು ಈ ಸಾಹಿತ್ಯವನ್ನು ಪರಿಚಯಿಸಿದ್ದಾರೆ.

ಕುವೆಂಪು ಅವರ ಮಕ್ಕಳ ಸಾಹಿತ್ಯವನ್ನು ಓದಿದಾಗ ನನ್ನ ಅಭಿಪ್ರಾಯದಂತೆ ಮಕ್ಕಳಿಗೆ ಅವಶ್ಯಕವಾಗಿರುವ ಬಹಳ ಮುಖ್ಯ ಅಂಶಗಳಾದ ಪರಿಸರ ಪ್ರೀತಿ, ದೇಶಭಕ್ತಿ, ಧೈರ್ಯ, ಸಂಬಂಧಗಳಿಗೆ ನೀಡುವ ಮಹತ್ವ- ಹೀಗೆ ಇನ್ನೂ ಹಲವಾರು ಮೌಲ್ಯಗಳನ್ನು ಮಕ್ಕಳಲ್ಲಿ ಬೆಳೆಸಲು ಮುಂದಾಗಿದ್ದಾರೆ. ಹಾಗೆಯೇ ಬೆಳೆಯುತ್ತಿರುವ ಈಗಿನ ಮಕ್ಕಳಿಗೆ ಅಂದರೆ ಮುಂದಿನ ಪೀಳಿಗೆಗೆ ವಿಶ್ವಮಾನವ ಪ್ರಜ್ಞೆಯನ್ನು ಪ್ರತಿಯೊಬ್ಬರಲ್ಲೂ ಅಳವಡಿಸುವಂತಹ ಮಕ್ಕಳ ಸಾಹಿತ್ಯ ಹೆಚ್ಚಿನ ಮಟ್ಟದಲ್ಲಿ ಬರಬೇಕೆಂಬುದು ಕುವೆಂಪುರವರ ಅಭಿಲಾಷೆಯಾಗಿತ್ತು ಎಂಬುದನ್ನು ಅವರ ಸಾಹಿತ್ಯದ ಮೂಲಕ ತಿಳಿದುಕೊಳ್ಳಬಹುದಾಗಿದೆ, ಏಕೆಂದರೆ ಅವರ ಪ್ರಕಾರ:-

"ಇಂದಿನ ಜಗತ್ತು ಹಿಂದಿನ ಜಗತ್ತಿನಂತಿಲ್ಲ. ಇಂದಿನ ಮಕ್ಕಳು ಹಿಂದಿನ ಮಕ್ಕಳಂತಿಲ್ಲ. ಇಂದಿನ ಮಕ್ಕಳಿಗೆ ಬೇಕಾಗುವ ವಿದ್ಯೆಯ ಸ್ವರೂಪ ಇಂದಿನ ವೈಜ್ಞಾನಿಕ ಜಟಿಲ ನಾಗರಿಕ ಜೀವನಕ್ಕೆ ಹೊಂದಿಕೊಳ್ಳುವ ಪ್ರತಿಕ್ರಿಯೆಗೆ ಅವಶ್ಯಕವಾಗುವ ಲಕ್ಷಣದಿಂದ ಕೂಡಿರಬೇಕು. ಅದರಲ್ಲಿಯೂ ಭಾವಜೀವನಕ್ಕೆ ಸಂಬಂಧಪಡುವ ಮನೋಧರ್ಮದ ಲಕ್ಷಣ ಅತ್ಯಂತ ವೈಜ್ಞಾನಿಕವೂ, ವೈಚಾರಿಕವೂ ಆಗಿರಬೇಕು. ಇನ್ನೂ ಮುಂದೆ ನಮ್ಮ ಮಕ್ಕಳು ಸಂಕುಚಿತ ಮತಭಾವನೆಗಳನ್ನೆಲ್ಲ ತಿರಸ್ಕರಿಸಿ ವಿಶಾಲ ಅಧ್ಯಾತ್ಮಕ್ಕೆ ಮಾತ್ರ ವಿದ್ಯಾರ್ಥಿಗಳಾಗಬೇಕು. ಲೋಕದ ಶಾಂತಿ ಸೌಖ್ಯಗಳಿಗೆ ಕಾರಣವಾಗುವ ಧರ್ಮವನ್ನು ವೈಚಾರಿಕತೆಯಿಂದ ಕಂಡುಕೊಂಡು ಮತಗಳನ್ನೆಲ್ಲ ಮತಿಯ ಒರೆಗಲ್ಲಿಗೆ ತಿಕ್ಕಬೇಕು ಮತ ಜಾತಿಗಳನ್ನೆಲ್ಲಾ ತಮ್ಮ ಮನಸ್ಸಿನ ಹತ್ತಿರಕ್ಕೂ ಬರಕೊಡದೆ ದೂರೀಕರಿಸಬೇಕು. 'ಅನಿಕೇತನ'ರಾಗಿ ವೈಚಾರಿಕತೆಯ ಅಡಿಗಲ್ಲಿನ ಮೇಲೆ ತಮ್ಮ ಅಭ್ಯುದಯ ನಿಃಶ್ರೇಯ ಸರಳ ವೈಜ್ಞಾನಿಕ ಅಭೀಪ್ಸಾ ವೇದಿಕೆಗಳನ್ನು ನಿರ್ಮಿಸಿಕೊಳ್ಳಬೇಕು".[೧]

---

೧. ಶಿವಾರೆಡ್ಡಿ,ಕೆ.ಸಿ.(ಸಂ.), ಕುವೆಂಪು ಸಮಗ್ರ ಗದ್ಯ ಸಂಪುಟ-೨, ಪ್ರಸಾರಾಂಗ, ಕ.ವಿ.ವಿ., ೨೦೦೪, ಪು. ೭೪೬.

ಈ ಮೇಲಿನ ಹೇಳಿಕೆಯನ್ನು ಗಮನಿಸಿದಾಗ ಕುವೆಂಪುರವರು ಮಕ್ಕಳ ಸಾಹಿತ್ಯದಲ್ಲಿ ವೈಚಾರಿಕತೆಗೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡಿದ್ದಾರೆ. ಇದರಿಂದಾಗಿ ಮಕ್ಕಳ ಮನಸ್ಸು ವಿಶಾಲಗೊಳ್ಳುವುದರ ಜೊತೆಗೆ ಉತ್ತಮವಾದ ಚಿಂತನೆಗಳನ್ನು, ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಮುಂದೆ ಸಾಗಲು ಅನುಕೂಲವಾಗುತ್ತದೆ ಎಂದು ಹೇಳಬಹುದು.

"ನಮ್ಮನ್ನು ಹಳೆಯ ಮೌಲ್ಯಗಳಿಂದ ಪಾರು ಮಾಡುವಂತಾಗಲಿ ನಮ್ಮ ಮಕ್ಕಳನ್ನು ಎಷ್ಟರಮಟ್ಟಿಗೆ ನಾವು ಈ ಮತಗಳಿಂದ ಪಾರುಮಾಡುತ್ತೇವೆಯೋ ಅಷ್ಟರಮಟ್ಟಿಗೆ ನಾವು ಬದುಕುತ್ತೇವೆ. you muxt save our children from our religions. Let us have spirituality, but not religions, spirituality is a fundamental scientific absolute truth. But religions are horrible. Every where they have created conflict, terror and bloodrhed. ಅದಕ್ಕೋಸ್ಕರ ಮುಂದೆ ಬರುವ ನಮ್ಮ ಮಕ್ಕಳಿಗೆ ಈ ದೃಷ್ಟಿಯನ್ನು ಸ್ವಲ್ಪ ವೈಜ್ಞಾನಿಕವಾಗಿ ಕೊಟ್ಟರೆ ಲೇಸು ಅಂತ ನಾನು ಭಾವಿಸುತ್ತೇನೆ"[೧] – ಎಂಬ ಹೇಳಿಕೆಯ ಮೂಲಕ ಕುವೆಂಪುರವರು ಮಕ್ಕಳಿಗೆ ಬಾಲ್ಯದಿಂದಲೇ ಜಾತಿ, ಧರ್ಮ ಎಂಬ ಅಂಶಗಳಿಂದ ದೂರವಿರಿಸಿ ಅವರಲ್ಲಿ ವಿಶಾಲ ಮನೋಭಾವನೆ ಬೆಳೆಸಬೇಕೆಂಬುದು ಇವರ ಆಶಯವಾಗಿದೆ.

ಹುಟ್ಟುವ ಪ್ರತಿಯೊಂದು ಮಗುವಿಗು ಮಾನವೀಯ ಮವಲ್ಯಗಳು ಅತೀ ಅವಶ್ಯಕವೇ ಆಗಿದೆ. ಆದ್ದರಿಂದ ಎಲ್ಲಾ ಮಕ್ಕಳ ತಂದೆ-ತಾಯಿಗಳು ಬಾಲ್ಯದಲ್ಲಿಯೇ ಉತ್ತಮ ಗುಣಗಳನ್ನು ಅಳವಡಿಸಲು ಪ್ರೋತ್ಸಾಹಿಸಿದರೆ ಕುವೆಂಪುರವರು ಹೇಳಿದ ಹಾಗೆಯೇ ಅವರು ಕಂಡಂತ ಕನಸಿನಂತೆಯೇ ನಿಜವಾಗುವುದರಲ್ಲಿ ಸಂಶಯವಿಲ್ಲವೆಂದು ಹೇಳಬಹುದು.

ಇಂತಹ ಮಾನವೀಯ ಗುಣಗಳನ್ನು ಒಳಗೊಂಡಿರುವಂತಹ ಕುವೆಂಪು ಅವರ ಮಕ್ಕಳ ಸಾಹಿತ್ಯದ ಪ್ರಕಾರಗಳಾದ ಕಥೆ, ಕವನ, ನಾಟಕಗಳಲ್ಲಿ ಬರುವಂತಹ ಅನೇಕ ಸನ್ನಿವೇಶಗಳನ್ನು ಇರುವಂತಹ ಅಂಶಗಳನ್ನು ಈ ಅಧ್ಯಾಯದ ಮೂಲಕ ತಿಳಿಯಬಹುದಾಗಿದೆ.

ಕುವೆಂಪು ಅವರ ಮಕ್ಕಳ ಸಾಹಿತ್ಯದಲ್ಲಿ ಒಂದಾದಂತಹ ಅವರ ಮೊದಲ ಕೃತಿ 'ಅಮಲನ ಕಥೆ'ಯ ಬಗ್ಗೆ ತಿಳಿಯುವುದಾದರೆ, ಅಮಲ ಮತ್ತು ಅವನ ಮಗ ಮಧುರನ ಜೀವನದಲ್ಲಿ ನಡೆದ ಮುಖ್ಯವಾದ ಘಟನೆಗಳು ಮಕ್ಕಳಲ್ಲಿ ನೀತಿಯನ್ನು ಬೆಳೆಸುತ್ತದೆ. ಅಂದರೆ, ನಮ್ಮಂತೆ ಸಾಮಾನ್ಯ ಮನುಷ್ಯನಾಗಿದ್ದ ಅಮಲನು ದೇವರ ಬಗ್ಗೆ ಅಪಾರವಾದ ಭಕ್ತಿ,

---

೧. ಶಿವಾರೆಡ್ಡಿ.ಕೆ.ಸಿ.(ಸಂ.), ಕುವೆಂಪು ಸಮಗ್ರ ಗದ್ಯ ಸಂಪುಟ-೨, ಪ್ರಸಾರಾಂಗ, ಕ.ವಿ.ವಿ., ೨೦೦೪, ಪು. ೧೫೧.

ನಂಬಿಕೆಯನ್ನು ಇಟ್ಟುಕೊಂಡಿದ್ದನು. ಸದಾ ಕಾಲ ಹರಿಯನ್ನು ಭಜಿಸುವ ಈ ದೈವಭಕ್ತನಿಗೆ ಬೇಡನೊಬ್ಬನಿಂದ ಹರಿಣವನ್ನು ರಕ್ಷಿಸುವ ಸಂದರ್ಭವು ಒದಗುತ್ತದೆ.

ಈ ಸಂದರ್ಭದಲ್ಲಿ ಅಮಲನು ಬೇಡನಿಗೆ ಹರಿಣವನ್ನು ಕೊಲ್ಲಬೇಡವೆಂದು ಅನೇಕ ರೀತಿಯ ಬುದ್ಧಿಮಾತುಗಳನ್ನು ಹೇಳುತ್ತಾನೆ. ಕೇಳಲು ಉಪದೇಶದಂತಿದ್ದ ಅಮಲನ ಮಾತುಗಳಲ್ಲಿ 'ಕರುಣೆ' ಎಂಬ ಮೌಲ್ಯದ ಬಗ್ಗೆ ಮಾತನಾಡಿರುವುದು ಇಲ್ಲಿ ಗಮನಾರ್ಹವಾಗಿವೆ. ಏಕೆಂದರೆ, ಮನುಷ್ಯ ಎಂದ ಮೇಲೆ ಪ್ರತಿಯೊಬ್ಬರಲ್ಲೂ ಕರುಣೆ ಎಂಬುದು ಇದ್ದೇ ಇರುತ್ತದೆ. ಅದನ್ನು ಮನುಷ್ಯನಾದವನು ಸನ್ನಿವೇಶಕ್ಕೆ ತಕ್ಕಂತೆ ಹೊರಚಾಚುತ್ತಾನೆ.

ಈಗಿನ ಸನ್ನಿವೇಶದ ಪ್ರಕಾರ ಮನುಷ್ಯ-ಮನುಷ್ಯರಿಗೆ ಸಹಾಯ ಮಾಡುವುದು ಕಷ್ಟವಾಗಿದೆ. ಆದರೆ ಇಲ್ಲಿ ಅಮಲ ಕೇವಲ ಒಂದು ಪ್ರಾಣಿಗೆ ಕರುಣೆ ತೋರಿಸಿ ತನ್ನ ಪ್ರಾಣವನ್ನು ಲೆಕ್ಕಿಸದೆ ಸಹಾಯ ಮಾಡಿ ಹರಿಣವನ್ನು ಉಳಿಸುತ್ತಾನೆ. ಇಂತಹ ಸನ್ನಿವೇಶವನ್ನು ಕುವೆಂಪುರವರು ಈ 'ಅಮಲನಕಥೆ'ಯಲ್ಲಿ ಚಿತ್ರಿಸಿದ್ದಾರೆ.

"ಧರಣಿಯೊಳಗಿಹ ಜೀವರೊಳಗೆ
ಇರುಳು ಚಲಿಸುವ ಅಸುರರೊಳಗೆ,
ನರನು ಪರಮನು ಎಂದು ಉಸುರಲು
ಕರುಣೆ ಎಂಬುದೆ ಸಾಕ್ಷಿಯು!

ಕರುಣೆ ಎಂಬುದು ದೇವ ದೇವನ
ಪರಮ ಸನ್ನಿಧಿಯಿಂದ ಬರುವುದು!
ಕರುಣೆ ಎಂಬುದು ನರರು ಸುರರೊಳು
ಹರಿಯ ನಾಮದಿ ಚರಿಪುದು!

ಕರುಣೆಯೆಂಬುವ ಮುಕುಟಕಿಂತಲು
ದೊರೆಗೆ ಬೇರೆಯ ಮುಕುಟವಿರುವುದೇ?
ಕರುಣೆ ಎಂಬಾ ಖಡ್ಗಕಿಂತಲು
ಪರಮ ಖಡ್ಗವು ಇರುವುದೇ?

ಅರಸರೊಳಗದು ಮುಕುಟ ರೂಪದಿ
ಪುರುಷರೊಳಗದು ವೀರ ರೂಪದಿ

ತರುಣಿಯೊಳಗದು ಪುಷ್ಪ ರೂಪದಿ
ಕರುಣೆಯೆಂಬುದು ಮೆರೆವುದು"[1]

– ಎಂಬುದಾಗಿ ಈ ಕವನದ ಮೂಲಕ ಕರುಣೆ ಎಂಬುದು ದೇವರು ಕರುಣಿಸಿರುವಂತಹ ವರವಾಗಿದೆ. ಇದು ದೇವರ ಸಾನಿಧ್ಯದಿಂದಲೇ ಬಂದಿರುವುದಾಗಿದ್ದು. ಕರುಣೆಯೇ ಪರಮ ಖಡ್ಗವಾಗಿದೆ. ಕರುಣೆ ಎಂಬುದನ್ನು ಪುರುಷರ ಅಂದರೆ ಗಂಡಸರ ವೀರತನದಲ್ಲು, ಹೆಂಗಸರಲ್ಲಿ ಹೂವಿನ ರೂಪದಲ್ಲೂ ಕಾಣಲಾಗುತ್ತದೆ ಎಂಬುದನ್ನು ಕುವೆಂಪು ಅಮಲನ ಮೂಲಕ ತಿಳಿಸಿದ್ದಾರೆ.

ಯಾವುದೇ ಮನುಷ್ಯನಾಗಲಿ ತನ್ನ ಕಷ್ಟದ ಸಂದರ್ಭದಲ್ಲಿ ಇತರರ ಸಹಾಯವನ್ನು ಇಚ್ಛಿಸುತ್ತಾನೆ. ಅದು ಸಹಜವೇ. ಆದರೆ ಯಾರೂ ಸಹಾಯ ಮಾಡದೆ ಇದ್ದಾಗ ಕೊನೆಗೆ ನೆನೆಯುವುದು, ತಾನು ನಂಬಿಧ ದೇವರನ್ನು. ಏಕೆಂದರೆ ಕಷ್ಟದ ಕಾಲದಲ್ಲಿ ಯಾರೇ ಕೈ ಬಿಟ್ಟರು ತಾನು ನಂಬಿರುವ ದೇವರು ಕೈ ಬಿಡದೆ ಕೈ ಹಿಡಿದು ನಡೆಸಿ ಕಷ್ಟವನ್ನು ಪರಿಹರಿಸುತ್ತಾನೆ ಎಂಬ ಬಲವಾದ ನಂಬಿಕೆ ನಮ್ಮಲ್ಲಿ ಈಗಲೂ ಇದ್ದೇ ಇದೆ. ಇಂತಹ ಒಂದು ಸನ್ನಿವೇಶವನ್ನು ಈ ಅಮಲನ ಕಥೆಯಲ್ಲಿ ನೋಡಬಹುದಾಗಿದೆ.

ಹೀಗೆ ಮುಂದುವರಿದಂತೆ ಅಮಲನ ಮಗ ಅಮಲನಂತೆಯೇ ಮಧುರನು ಕೂಡ ಭಕ್ತಿ, ಶ್ರದ್ಧೆ. ನಂಬಿಕೆ, ಧೈರ್ಯಕ್ಕೆ ಸಾಕ್ಷಿಯಾಗಿರುವುದನ್ನು ಈ ಕವನದಲ್ಲಿ ಕಾಣಬಹುದಾಗಿದೆ.

ಒಂದು ಸಂದರ್ಭದಲ್ಲಿ ಅಮಲನು ಕತ್ತಲಾದರು ಮನೆಗೆ ಇನ್ನೂ ಬರದೆ ಇರುವಾಗ ಗಾಬರಿಯಿಂದ ತನ್ನ ತಾಯಿಯ ಆಜ್ಞೆಯಂತೆ ಮಗ ಮಧುರನು ತನ್ನ ಅಪ್ಪನನ್ನು ಹುಡುಕಲು ಆ ಕತ್ತಲೆಯಲ್ಲಿ ಭಯಪಡದೆ ಪಂಜನ್ನು ಹಿಡಿದು ಆ ದಟ್ಟ ಕಾಡಿನಲ್ಲಿ ನಡೆದುಕೊಂಡೇ ಹೋಗುತ್ತಾನೆ. ಈ ಸನ್ನಿವೇಶವು ಮಕ್ಕಳಲ್ಲಿ ಭಯವನ್ನು ದೂರ ಮಾಡಿ ಒಳ್ಳೆಯ ಕೆಲಸಕ್ಕೆ ಧೈರ್ಯದಿಂದ ಮುನ್ನುಗ್ಗಬೇಕು ಎಂಬ ಅಂಶವನ್ನು ತಿಳಿಯಪಡಿಸುತ್ತದೆ.

ಹೀಗೆ ತನ್ನ ತಂದೆಯನ್ನು ಹುಡುಕುವ ಸಂದರ್ಭದಲ್ಲಿ ದಿಢೀರನೆ ಬಂದಂತಹ ಮಳೆಗೆ ಸಿಕ್ಕಿಕೊಂಡ ಮಧುರನು ಹರಿಯನ್ನು ಭಜಿಸುತ್ತಾನೆ. ತನ್ನ ತಂದೆಯಂತೆ ಭಕ್ತಿಯಿಂದ ನೆನೆದ ಮಧುರನಿಗೆ ದೇವರು ದರ್ಶನವನ್ನು ನೀಡುತ್ತಾನೆ. ಮಧುರನಿಗಿದ್ದ ಕಷ್ಟವನ್ನು ಪರಹರಿಸಿ ಕೊನೆಗೆ ಲೀನವಾಗುತ್ತಾನೆ.

ಆದರೆ ದೇವರು ದರ್ಶನ ನೀಡಿದ ಸಂದರ್ಭದಲ್ಲಿ ಮಧುರನು ಕಂಡಂತಹ ಲೋಕವೇ ಬೇರೆಯಾಗಿರುದತ್ತದೆ. ಅದನ್ನು ಇಲ್ಲಿ ವಿವರಿಸುವುದಾದರೆ,

---

೧. ಕುವೆಂಪು, ಅಮಲನ ಕಥೆ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ೧೯೨೪, ಮೈಸೂರು, ಪು. ೧೨.

"ಕತ್ತಲಿಲ್ಲವು ಬೆಳಕು ಇಲ್ಲವು!
ಹೊತ್ತಿ ಉರಿಯುವ ದೀಪವಿಲ್ಲವು!
ಕತ್ತಿ ಈಟಿಯು ಕದನದಾಯುಧ
ಎತ್ತ ನೋಡಿದರಿಲ್ಲವು!

ಅಲ್ಲಿ ದುಃಖದ ಕೂಗು ಇಲ್ಲವು
ಅಲ್ಲಿ ಹಣದಾ ಜಗಳವಿಲ್ಲವು
ಅಲ್ಲಿ ಜನನವು ಮರಣವಿಲ್ಲವು
ಅಲ್ಲಿ ಢಂಬವು ಸೇರದು!

ಜಾತಿ ಭೇದಗಳಲ್ಲಿ ಇಲ್ಲವು!
ನೀತಿ ನಡತೆಗಳಲ್ಲಿ ಪರಮವು
ಖ್ಯಾತಿ ಎಂಬುದನಲ್ಲಿ ಬಯಸರು
ಪ್ರೀತಿ ಎಂಬುದು ಶ್ರೇಷ್ಠವು.

ನೇಮ ನಿಯಮಗಳಲ್ಲಿ ಇಲ್ಲವು
ಕಾಮ ಲೋಭಗಳಲ್ಲಿ ಸೇರವು
ಭೀಮ ಭುಜಬಲವಲ್ಲಿ ವಿಫಲವು
ಪ್ರೇಮವೆಂಬುದೆ ಶ್ರೇಷ್ಠವು"[೧]

ಮಧುರನ ಮೂಲಕ ಕುವೆಂಪುರವರು ಇಂತಹ ಲೋಕ ಇರಬೇಕೆಂದು ಈ ಕವನದಲ್ಲಿ ತಿಳಿಸಿದ್ದಾರೆ. ಈ ಕವನವನ್ನು ಓದುವುದರಿಂದ ಓದಿ ತಿಳಿದುಕೊಳ್ಳುವುದರಿಂದ ಕೇವಲ ಮಕ್ಕಳ ಮೇಲೆ ಮಾತ್ರವಲ್ಲದೆ ದೊಡ್ಡವರ ಮೇಲೂ ಪ್ರಭಾವವನ್ನು ಬೀರುವ ಮಟ್ಟಿಗೆ ಕುವೆಂಪು ರಚಿಸಿದ್ದಾರೆ.

ಒಟ್ಟಾರೆಯಾಗಿ ಹೇಳುವುದಾದರೆ 'ಅಮಲನ ಕಥೆ'ಯಲ್ಲಿ ಮಕ್ಕಳಿಗೆ ಅತ್ಯಗತ್ಯವಾಗಿ ಬೇಕಾಗಿರುವ ಜೀವನದಲ್ಲಿ ಅಳವಡಿಸಿಕೊಳ್ಳಲು ಬೇಕಾಗುವ ಪ್ರೀತಿ, ಭಕ್ತಿ, ಕರುಣೆ, ನಂಬಿಕೆ, ಪ್ರಕೃತಿ ಬಗೆಗಿನ ಕಾಳಜಿ ಹೀಗೆ ಇನ್ನೂ ಅನೇಕ ರೀತಿಯ ಅಂಶಗಳನ್ನು ಅಳವಡಿಸಿಕೊಳ್ಳಲು ಸಹಾಯಕವಾಗಿದೆ. ಅಷ್ಟೇ ಅಲ್ಲದೆ ಅಮಲ ಹರಿಣವನ್ನು ರಕ್ಷಿಸುವುದರ ಮೂಲಕ ಪ್ರಾಣಿ ಹಿಂಸೆ ಮಾಡಬಾರದು ಎಂಬ ಸಂದೇಶವನ್ನು ಕೂಡ ಕುವೆಂಪುರವರು ಈ ಕಥೆಯಲ್ಲಿ ತಿಳಿಸಿದ್ದಾರೆ.

---

೧. ಕುವೆಂಪು, ಅಮಲನ ಕಥೆ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ೧೯೨೪, ಮೈಸೂರು, ಪು. ೩೦.

ಕುವೆಂಪು ಅವರಿಗೆ ಅತೀ ಹೆಚ್ಚು ಪ್ರಖ್ಯಾತಿಯನ್ನು ತಂದುಕೊಟ್ಟಂತಹ 'ಬೊಮ್ಮನ ಹಳ್ಳಿಯ ಕಿಂದರಜೋಗಿ' ಯು ಎಲ್ಲರಿಗೂ ಜನಪ್ರಿಯ ಕೃತಿಯಾಗಿಯೇ ಪರಿಚಿತವಾಗಿದೆ.

ಕುವೆಂಪು ಅವರೇ ಸ್ವತಃ ತಮ್ಮ ಆತ್ಮಕಥನದಲ್ಲಿ ಈ ಕೃತಿಯ ರಚನೆಯ ಬಗ್ಗೆ ತಿಳಿಸಿದ್ದಾರೆ: – "ಅನೇಕರು ಈ ಕೃತಿಯನ್ನು 'ಬ್ರೌನಿಂಗ್' ಕವಿಯ 'ಪೈಡ್ ಪೈಪರ್ ಆಫ್ ಹ್ಯಾಮಲಿನ್' ಕವಿತೆಯ ಭಾಷಾಂತರವೆಂದು ಭಾವಿಸಿದ್ದಾರೆ. ಆದರೆ, ಅದನ್ನು ಬರೆಯುವಾಗ (ಈ ಕೃತಿಯನ್ನು) ಶಿವಮೊಗ್ಗದಲ್ಲಿ ನನ್ನ ಬಳಿ ಬ್ರೌನಿಂಗ್ ಕೃತಿ ಇರಲಿಲ್ಲ. ಅಷ್ಟೇ ಅಲ್ಲ ಇಂಗ್ಲಿಷಿನಲ್ಲಿ ಅದನ್ನು ವೆಸ್ಲಿಯನ್ ಹೈಸ್ಕೂಲಿನಲ್ಲಿ ನಾನು ಐದನೇ ಫಾರಂನಲ್ಲಿ ಓದುತ್ತಿದ್ದಾಗ ಪಠ್ಯಪುಸ್ತಕದಲ್ಲಿ ಓದಿದ್ದೇನೆ ಹೊರತು ಆಮೇಲೆ ಅದನ್ನು ಓದಿರಲೂ ಇಲ್ಲ. ಆದ್ದರಿಂದ ಅದು ಭಾಷಾಂತರವೂ ಅಲ್ಲ, ಅನುವಾದವೂ ಅಲ್ಲ. ಆ ಕಥೆಯ ನೆನಪಿನ ಆಧಾರದ ಮೇಲೆ ರಚಿತವಾದದ್ದು ಎಂದು ಹೇಳಬಹುದು"[೧] – ಈ ರೀತಿಯಾಗಿ ಕುವೆಂಪುರವರೇ ಹೇಳಿಕೊಂಡಿದ್ದಾರೆ.

ಇಡೀ ಬೊಮ್ಮನಹಳ್ಳಿಯೇ ಇಲಿಗಳ ಕಾಟದಿಂದ ಕಷ್ಟವನ್ನು ಅನುಭವಿಸುತ್ತಿದ್ದಾರೆ. ಆ ಹಳ್ಳಿಯ ಜನರಿಗೆ ಇಲಿಗಳ ಸಮಸ್ಯೆಯಿಂದ ಅಲ್ಲಿ ವಾಸಿಸಲು ಸಾಧ್ಯವಾಗುತ್ತಿಲ್ಲ ಹೀಗಿರುವಾಗ ಆ ಹಳ್ಳಿಯ ಜನರು ಅಲ್ಲಿನ ಗೌಡ ಎಲ್ಲರೂ ಸೇರಿ ಬಂದಿರುವ ಸಮಸ್ಯೆಯನ್ನು ಹೇಗಾದರೂ ಮಾಡಿ ಬಗೆಹರಿಸಬೇಕೆಂದು ಅನೇಕ ಪ್ರಯತ್ನಗಳನ್ನು ಮಾಡುತ್ತಾರೆ. ಆದರೆ, ಅವರು ಮಾಡಿದ ಪ್ರಯತ್ನಗಳಾವುವು ಪ್ರಯೋಜನಕ್ಕೆ ಬರುವುದಿಲ್ಲ. ಇದರಿಂದ ಬೇಸತ್ತ ಹಳ್ಳಿಯ ಜನರು ಆ ಊರಿನ ಗೌಡನನ್ನು ಬಂದಿರುವ ಸಮಸ್ಯೆಯನ್ನು ಬಗೆಹರಿಸಲಾರನೆಂದು ಮೂದಲಿಸಿ ಬೈಯ್ಯುತ್ತಾರೆ.

ಹಳ್ಳಿ ಜನರ ಮೂದಲಿಕೆ ಮಾತುಗಳನ್ನು ಕೇಳಲಾರದೆ ಬಂದಿರುವ ಇಲಿಗಳ ಸಮಸ್ಯೆಯನ್ನು ಪರಿಹರಿಸಲು ದಾರಿ ತೋರದೆ ಇಲಿಗಳ ಸಮಸ್ಯೆಯನ್ನು ಯಾರು ಬಗೆಹರಿಸುವರೋ ಅವರಿಗೆ ಆರು ಸಾವಿರ ನಾಣ್ಯವನ್ನು ಕೊಡುವುದಾಗಿ ಗೌಡನು ಹೇಳುತ್ತಾನೆ. ಇದೇ ಸಂದರ್ಭದಲ್ಲಿ ಆಗಮಿಸಿದ ವಿಚಿತ್ರ ಆಕಾರದ ಜೋಗಿಯು ತನ್ನ ಕಿಂದರಿ ನಾದದಿಂದ ಎಲ್ಲರನ್ನೂ ಆಕರ್ಷಿಸುತ್ತಾನೆ. ಕೊನೆಗೆ ಗೌಡನ ಮಾತಿನಂತೆ ತನ್ನ ಕಿಂದರಿ ನಾದದ ಮೂಲಕ ಜೋಗಿಯು ಇದ್ದಂತಹ ಇಲಿಗಳ ಕಾಟದ ಸಮಸ್ಯೆಯನ್ನು ಕೊನೆಗು ಬಗೆಹರಿಸಿಯೇ ಬಿಡುತ್ತಾನೆ.

---

೧. ಕುವೆಂಪು, ನೆನಪಿನ ದೋಣಿಯಲ್ಲಿ ೧, ಸಹ್ಯಾದ್ರಿ ಪ್ರಕಾಶನ, ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ೧೯೮೦, ಮೈಸೂರು, ಪು. ೧೦೯–೧೧೦.

ಆದರೆ, ಸಮಸ್ಯೆ ಬಗೆಹರಿದ ಮೇಲೆ ಗೌಡನು ತಾನು ಕೊಟ್ಟ ಮಾತಿನಂತೆ ಆರು ಸಾವಿರ ನಾಣ್ಯವನ್ನು ಕೊಡಲು ಹಿಂಜರಿದು ಕೊನೆಗೆ ತಾನು ಏನು ಕೊಡುವುದಿಲ್ಲವೆಂದು ಜೋಗಿಗೆ ಹೇಳಿಬಿಡುತ್ತಾನೆ. ಇದಕ್ಕೆ ತಕ್ಕ ಪ್ರತಿಫಲವಾಗಿ ಗೌಡನು ಮತ್ತೊಂದು ಸಂಕಷ್ಟಕ್ಕೆ ಸಿಲುಕುತ್ತಾನೆ.

'ಕೊಟ್ಟ ಮಾತಿಗೆ ತಪ್ಪಿ ನಡೆದರೆ ಮೆಚ್ಚನ ಪರಮಾತ್ಮನು' ಎಂಬ ಮಾತನ್ನು ನಮ್ಮ ಹಿರಿಯರು ಹೇಳುತ್ತಲೇ ಇರುತ್ತಾರೆ. ಈ ಮಾತು ನಿಜವೇ ಇರಬೇಕು. ಆದ್ದರಿಂದ ಇಲ್ಲಿಯೂ ಕೂಡ ಗೌಡನು ತಾನು ಕೊಟ್ಟ ಮಾತಿನ ಪ್ರಕಾರ ನಡೆದುಕೊಳ್ಳದಿದ್ದಾಗ ಜೋಗಿಯು ಇಡೀ ಹಳ್ಳಿಯ ಮಕ್ಕಳನ್ನು ತನ್ನ ಕಿಂದರಿ ನಾದದ ಮೂಲಕ ಆಕರ್ಷಿಸಿ ಎಲ್ಲಾ ಮಕ್ಕಳು ತಮ್ಮ ತಂದೆ-ತಾಯಿ, ಮನೆ-ಮಠಗಳನ್ನು ಬಿಟ್ಟು ಕಿಂದರಿ ಜೋಗಿಯನ್ನು ಹಿಂಬಾಲಿಸಿಕೊಂಡು ಹೋಗುವ ಪರಿಸ್ಥಿತಿ ಬರುತ್ತದೆ.

ಈ ಮೇಲಿನ ಸನ್ನಿವೇಶವನ್ನು ಗಮನಿಸಿದಾಗ ಕುವೆಂಪುರವರು ಮಕ್ಕಳಿಗೆ 'ಮೋಸ, ಸುಳ್ಳು, ವಂಚನೆ, ದ್ರೋಹ' ಇವುಗಳನ್ನು ಯಾವುದೇ ಸನ್ನಿವೇಶದಲ್ಲೂ ಯಾರಿಗೂ ಅಪಕಾರವನ್ನು ಮಾಡಬಾರದೆಂಬ ಅಂಶವನ್ನು ಈ ಮೂಲಕ ತಿಳಿಸಿದ್ದಾರೆ. ಈ ರೀತಿಯ ಮೋಸ ಮಾಡಿದರೆ ದೇವರು ಕೂಡ ಮೆಚ್ಚುವುದಿಲ್ಲ. ಅದಕ್ಕೆ ತಕ್ಕಂತಹ ಶಿಕ್ಷೆಯನ್ನು ಅನುಭವಿಸಬೇಕಾಗುತ್ತದೆ ಎಂಬುದನ್ನು ಈ ಮೂಲಕ ಪ್ರತಿಯೊಬ್ಬರು ತಿಳಿದುಕೊಳ್ಳಬಹುದಾಗಿದೆ.

ನಂತರ ಕಿಂದರಿ ನಾದಕ್ಕೆ ಮನಸೋತ ಮಕ್ಕಳು ಅವನು ನಾದದ ಮೂಲಕ ಒಂದು ಹೊಸ ಲೋಕವನ್ನೇ ಕಾಣುತ್ತಾರೆ. ಮಕ್ಕಳು ನಿಜವಾದ ಜೀವನದಲ್ಲಿ ಪಡೆಯಲಾರದ್ದನ್ನು, ಇಲ್ಲದೆ ಇರುವ ಸಂತೋಷವನ್ನು ಜೋಗಿಯ ಲೋಕದಲ್ಲಿ ಕಾಣಲಾಗುತ್ತದೆ. ಆದರೆ ಈ ಸಂತೋಷವನ್ನು ಅನುಭವಿಸಲಾಗದ ಅದೇ ಹಳ್ಳಿಯ ಒಬ್ಬ ಕುಂಟ ಹುಡುಗನು ದುಃಖದಿಂದ ಅಳುತ್ತಲೆ ಜೋಗಿಯ ಲೋಕವನ್ನು -ಕುವೆಂಪುರವರ ಕನಸಿನ ರಾಜ್ಯದ ಚಿತ್ರಣವನ್ನು ಬಿಚ್ಚಿಡುತ್ತಾನೆ.

"ಅಯ್ಯೋ ಎನಗಿಲ್ಲವರಾನಂದ!
ಜೋಗಿಯು ಕಿಂದರಿ ಬಾರಿಸೆ ಕಂಡೆವು
ಬಣ್ಣದ ಮನೆಗಳ ಪಟ್ಟಣವ
ಹಣ್ಣುಗಳುದುರಿದ ತೋಟಗಳ!

ನಾನಾ ಆಟದ ಸಾಮಾನುಗಳ
ತರತರ ರಾಗದ ಗೊಂಬೆಗಳ

ಮಾತಿಗೆ ಮೀರಿದ ಆನಂದಗಳ
ಕೈಗೇ ಸಿಕ್ಕುವ ಹಕ್ಕಿಗಳ!
ಜಿಂಕೆಗಳೆಮ್ಮೊಡನಾಡಿದುವಲ್ಲಿ,
ಮೊಲಗಳು ಕುಳಿತುವು ಮೈಮೇಲಲ್ಲಿ!
ಅಯ್ಯೋ ಹೋಯಿತೆ ಆ ನಾಕ!
ಅಯ್ಯೋ ಬಂದಿತೆ ಈ ಲೋಕ!"[೧]

ಎಂದು ಕುಂಟ ಹುಡುಗನು ದುಃಖದ ಮೂಲಕ ಬೊಮ್ಮನ ಹಳ್ಳಿಯಲ್ಲಿ ಸಿಗದೇ ಇರುವುದೆಲ್ಲ ಜೋಗಿಯ ಲೋಕದಲ್ಲಿ ಸಿಗುತ್ತದೆ ಎಂಬುದನ್ನರಿತ ಕುಂಟ ಹುಡುಗ ಇದನ್ನೆಲ್ಲ ಅನುಭವಿಸಲು ತನಗೆ ಸಾಧ್ಯವಾಗುತ್ತಿಲ್ಲ ಎಂಬುದನ್ನು ತನ್ನ ಅಳಲಿನ ಮೂಲಕ ತೋರ್ಪಡಿಸುತ್ತಿದ್ದಾನೆ.

ಈ ಕೃತಿಯಲ್ಲಿ ಕವಿಯು ಅತೀ ಸರಳವಾದ ಭಾಷೆಗಳನ್ನು ಬಳಸಿರುವುದರ ಜೊತೆಗೆ ಮಕ್ಕಳಿಗೆ ಕುತೂಹಲ, ಕಲ್ಪನೆ, ಹಾಸ್ಯ ಪ್ರಜ್ಞೆಗಳ ಮೂಲಕ ಅವರ ಬುದ್ಧಿಯನ್ನು ಚುರುಕುಗೊಳಿಸುವಂತೆ ಮಾಡಿದೆ. ಇಂತಹ ಅಂಶಗಳಿರುವುದರಿಂದ ಮಕ್ಕಳು ಅಳವಡಿಸಿಕೊಳ್ಳಲು ಸಹಕಾರಿಯಾಗಿದೆ.

ಈ ಕೃತಿಯು ಕೇವಲ ಮಕ್ಕಳಿಗನ್ನಷ್ಟೇ ಅಲ್ಲದೆ ಹಿರಿಯರನ್ನು ಕೂಡ ಕಿನ್ನರ ಲೋಕಕ್ಕೆ ಕರೆದುಕೊಂಡು ಹೋಗುವುದರಲ್ಲಿ ಅನುಮಾನವೇ ಇಲ್ಲ. ಏಕೆಂದರೆ ಕುವೆಂಪು ಈ ಕವಿತೆಯಲ್ಲಿ ಬಳಸಿರುವ ಪದಗಳ ಜೋಡಣೆಯು ಎಲ್ಲರಿಗೂ ಹಾಸ್ಯಪ್ರಜ್ಞೆಯನ್ನು ಮೂಡಿಸುತ್ತದೆ. ಇದರಿಂದ ಎಲ್ಲರ ಮನಸ್ಸಲ್ಲು ಈ ಕೃತಿಯು ಹಚ್ಚ ಹಸುರಾಗಿ ಉಳಿದುಕೊಳ್ಳುತ್ತದೆ.

ಒಟ್ಟಾರೆಯಾಗಿ ಈ ಕೃತಿಯಲ್ಲಿ ಹಳ್ಳಿಯನ್ನು ಇಲಿಗಳ ಕಾಟದಿಂದ ಮುಕ್ತಗೊಳಿಸಲು ಬರುವ ಜೋಗಿಯ ಆಗಮನ, ಕೊಟ್ಟ ಮಾತಿಗೆ ನಡೆದುಕೊಳ್ಳದೆ ಮತ್ತೊಂದು ಸಮಸ್ಯೆಗೆ ಸಿಲುಕಿಕೊಳ್ಳುವ ಗೌಡನ ಪರಿಸ್ಥಿತಿಯನ್ನು ನೋಡಿದರೆ 'ಮಾಡಿದುಣ್ಣೋ ಮಹಾರಾಯ' ಎಂಬ ಗಾದೆ ಮಾತು ನೆನಪಿಗೆ ಬರುತ್ತದೆ. ಕಿಂದರಿ ನಾದದಿಂದ ಮಕ್ಕಳು ಒಂದು ಸುಂದರವಾದ ಲೋಕವನ್ನೇ ಕಾಣುತ್ತಾರೆ. ತಮ್ಮನ್ನು ಬಿಟ್ಟು ಹೋದ ಮಕ್ಕಳನ್ನು ನೋಡಿ ಅವರಿಗಾದ ಶಿಕ್ಷೆಯೆಂದು ಭಾವಿಸುವುದು. ಇಂತಹ ಸನ್ನಿವೇಶಗಳನ್ನು ಈ ಕೃತಿಯಲ್ಲಿ ಕಾಣಬಹುದಾಗಿದೆ.

---

೧. ಕುವೆಂಪು, ಬೊಮ್ಮನ ಹಳ್ಳಿಯ ಕಿಂದರಿಜೋಗಿ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ೧೯೭೩, ಮೈಸೂರು, ಪು. ೨೭.

ಕುವೆಂಪುರವರ ಮತ್ತೊಂದು ಕೃತಿಯಾದ 'ನರಿಗಳಿಗೇಕೆ ಕೋಡಿಲ್ಲ' ಎಂಬ ಕೃತಿಯು ಸಹಾ ಪ್ರಾಣಿ-ಪಕ್ಷಿಗಳ ಮೂಲಕ ಮಕ್ಕಳಿಗೆ ಅವಶ್ಯಕವಾದ ನೀತಿ ಗುಣಗಳನ್ನು ಮೌಲ್ಯಗಳನ್ನು ಒಳಗೊಂಡಿದೆ.

ಒಂದು ಹೆಮ್ಮರದ ಕೊಂಬೆಯಲ್ಲಿ ಒಂದು ಪುಟ್ಟದಾದ ಗೂಡನ್ನು ಕಟ್ಟಿ ಗುಬ್ಬಕ್ಕ-ಗುಬ್ಬಣ್ಣ ಎಂಬ ದಂಪತಿಗಳು ಮೂರು ಪುಟ್ಟ ಮಕ್ಕಳ ಜೊತೆ ಸಂತೋಷದಿಂದ ಜೀವನವನ್ನು ಸಾಗಿಸುತ್ತಿರುತ್ತಾರೆ. ಆದರೆ ಮೊದಲು ಈ ದಂಪತಿಗಳಿಗೆ ಮಕ್ಕಳಿಲ್ಲದ ಕಾರಣ ಕಾಶಿಯ ದೇವರಲ್ಲಿ ಹರಕೆಯನ್ನು ಗುಬ್ಬಣ್ಣ ಮಾಡಿಕೊಂಡಿರುತ್ತಾನೆ. ಇದಾದ ಮೇಲೆ ಈ ದಂಪತಿಗಳಿಗೆ ಮಕ್ಕಳಾಗುತ್ತವೆ. ಈ ಹರಕೆಯನ್ನು ತೀರಿಸಲು ಗುಬ್ಬಣ್ಣ ಕಾಶಿಗೆ ತೆರಳುತ್ತಾನೆ. ಮನೆ, ಮಕ್ಕಳ ಜವಾಬ್ದಾರಿಯನ್ನು ಆ ಸಂದರ್ಭದಲ್ಲಿ ಗುಬ್ಬಕ್ಕನೇ ನಿಭಾಯಿಸುತ್ತಾಳೆ.

ಈ ಸನ್ನಿವೇಶವನ್ನು ನೋಡಿದಾಗ ಮಕ್ಕಳಿಂದ ಹಿಡಿದು ಪ್ರತಿಯೊಬ್ಬರು ಕೂಡ ದೇವರಲ್ಲಿ ನಂಬಿಕೆ ಇಡಬೇಕು. ದೇವರನ್ನು ಪೂಜಿಸುವುದು, ದೇವರಲ್ಲಿ ಹರಕೆ ಮಾಡಿಕೊಳ್ಳುವುದು ಇದೆಲ್ಲ ಅನಾದಿಕಾಲದಿಂದಲೂ ನಡೆದುಕೊಂಡೇ ಬಂದಿದೆ. ಈಗಲೂ ಕೂಡ ಈ ಪದ್ಧತಿಗಳು ನಡೆಯುತ್ತಲೇ ಇವೆ. ಆದ್ದರಿಂದಲೇ ಕವಿಯು ಇಲ್ಲಿ ಈ ಪಕ್ಷಿಗಳ ಮೂಲಕ ಇದನ್ನೆಲ್ಲಾ ತಿಳಿಸಿದ್ದಾರೆ.

ಸಂತೋಷದಿಂದ ಜೀವನ ನಡೆಸುತ್ತಿದ್ದ ಈ ಸಂಸಾರವು ಒಂದು ದಿನ ಜೋರಾದ ಮಳೆ, ಗಾಳಿ, ಸಿಡಿಲು, ಗುಡುಗು ಬಂದಾಗ ಗುಬ್ಬಕ್ಕ ತನ್ನ ಮನೆಯು ಬೆಲ್ಲದ ಗೋಡೆಯಿಂದ, ಸಕ್ಕರೆ ಬಾಗಿಲು, ಕಬ್ಬಿನ ಮುಚ್ಚಿಗೆಯಿಂದ ಕೂಡಿದ್ದರಿಂದ ಎಲ್ಲಿ ಅದೆಲ್ಲ ಹಾಳಾಗುತ್ತವೋ ಎಂದು ಚಿಂತೆಗೆ ಒಳಗಾಗಿದ್ದ ಸಂದರ್ಭದಲ್ಲಿ ಆಶ್ರಯಕ್ಕಾಗಿ ಇವಳ ಮನೆಗೆ 'ಹುಲಿಯಣ್ಣ, ನರಿಯಣ್ಣ, ಕರಡ್ಯಣ್ಣ' ಮೂವರು ಬಂದಾಗ ಆ ಪುಟ್ಟ ಮನೆ ಆಗಿದ್ದರು ಕೂಡ ಗುಬ್ಬಕ್ಕ ಅವರಿಗೆಲ್ಲ ಆಶ್ರಯ ನೀಡಿ ಆದರದಿಂದ ಸತ್ಕರಿಸಿ ತನ್ನ ಔದಾರ್ಯವನ್ನು ಮೆರೆಯುತ್ತಾಳೆ. ಪುಟ್ಟ ಮನೆಯಾಗಿದ್ದರು ಕೂಡ ಗುಬ್ಬಕ್ಕ ತನ್ನ ಮೂರು ಮಕ್ಕಳು ಇದ್ದರೂ ಆ ಮೂವರಿಗು ದೊಡ್ಡ ಮನಸ್ಸಿನಿಂದ ಆಶ್ರಯವನ್ನು ನೀಡುತ್ತಾಳೆ. ಇಂತಹ ಮನಸ್ಸು ಮನುಷ್ಯರಾದ ನಮಗೆ ಇರುವುದಿಲ್ಲ. ಇಂತಹ ಅಂಶಗಳನ್ನು ಮಕ್ಕಳು ಬೆಳೆಸಿಕೊಳ್ಳುವುದರಿಂದ ಅವರು ಕೂಡ ಇತರರಿಗೆ ಕಷ್ಟದ ಕಾಲದಲ್ಲಿ ಸಹಾಯ ಮಾಡುವುದನ್ನು, ಔದಾರ್ಯವನ್ನು ಅಳವಡಿಸಿಕೊಂಡು ಮುಂದೆ ಸಾಗಲು ಈ ಕೃತಿ ಅವಶ್ಯಕವಾಗಿದೆ.

ಗುಬ್ಬಕ್ಕನ ಮನೆಯಲ್ಲಿ ಆಶ್ರಯ ಪಡೆದುಕೊಂಡ ಮೂವರು ಪ್ರಯಾಣಿಕರಲ್ಲಿ ಒಬ್ಬರಾದ ಕರಡ್ಯಣ್ಣನು ಮನೆಯ ಗೋಡೆಯ ಮೇಲೆ ನೇತು ಹಾಕಿದ್ದ 'ಮಹಾತ್ಮಗಾಂಧಿ, ಶ್ರೀ ರಾಮಕೃಷ್ಣ ಪರಮಹಂಸರು ಮತ್ತು ವಿವೇಕಾನಂದರ ಚಿತ್ರಪಟಗಳನ್ನು ನೋಡಿ "ಇವೇಕೆ ಈ ಪಟಗಳು"

ಎಂದು ಕೇಳಿದಾಗ ಗುಬ್ಬಕ್ಕನ ಮೂಲಕ ಕವಿ ಇದಕ್ಕೆ ಉತ್ತರವಾಗಿ "ಮಕ್ಕಳು ಈ ಮಹಾಪುರುಷರ ಸನ್ನಿಧಿಯಲ್ಲಿಯೇ ಬೆಳೆದರೆ ಅವರೂ ಮಹಾತ್ಮರಾಗುತ್ತಾರೆ. ಭಾರತಮಾತೆಯ ಉದ್ಧಾರ ಮಾಡುತ್ತಾರೆ. ಅದಕ್ಕೋಸ್ಕರ ಈ ಪಟಗಳನ್ನು ಇಟ್ಟಿದ್ದೇನೆ. ಅವರಿಗೆ ದಿನವೂ ಅವರ ಕಥೆಗಳನ್ನು ಜೋಗುಳದಂತೆ ಹೇಳುತ್ತೇನೆ. ಹಾಲು ಬೆಣ್ಣೆಗಳಲ್ಲಿ ಅವರ ಮಹಿಮೆಯನ್ನು ಊಡುತ್ತೇನೆ"[೧] ಎಂದಳು ಗುಬ್ಬಕ್ಕ.

ಇಲ್ಲಿ ಒಂದು ಮುಖ್ಯವಾದ ಅಂಶವನ್ನು ಗಮನಿಸುವುದಾದರೆ, ಎಲ್ಲರ ಮನೆಯಲ್ಲು ಇರುವಂತೆ ದೇವರ ಚಿತ್ರಪಟಗಳ ಬದಲು ಮಹಾತ್ಮರ ಚಿತ್ರಪಟಗಳನ್ನು ಇಟ್ಟಿದ್ದಾರೆ. ಏಕೆಂದರೆ, ಇವರೆಲ್ಲರೂ ಕುವೆಂಪುರವರ ಮೇಲೆ ಪ್ರಭಾವ ಬೀರಿದಂತಹ ಮಹಾನ್ ವ್ಯಕ್ತಿಗಳಾಗಿದ್ದು, ಈ ಕಥೆಯ ಮೂಲಕ ಮಕ್ಕಳಿಗೆ ಇಂತಹ ಮಹಾತ್ಮರ ಬಗ್ಗೆ ಪ್ರೀತಿ, ಗೌರವವನ್ನು ಬೆಳೆಸಿ ಅವರಂತೆಯೇ ನೀವು ಕೂಡ ಬದುಕಿ ಬಾಳಬೇಕೆಂಬ ಆಶಯವನ್ನು ಮುಂದಿಟ್ಟಿದ್ದಾರೆ. ದೇಶಕ್ಕಾಗಿ ಹೋರಾಡಿದ ಈ ಮಹಾತ್ಮರ ಅನುಯಾಯಿಗಳಾಗಿ ನೀವು ಅವರಲ್ಲಿರುವ ಗುಣಗಳನ್ನು ಅಳವಡಿಸಿಕೊಂಡು ಈ ದೇಶದ ಮಕ್ಕಳಾಗಬೇಕೆಂದು ತಿಳಿಸಿದ್ದಾರೆ. ಇದಷ್ಟೇ ಅಲ್ಲದೆ ಗುಬ್ಬಕ್ಕ ತನ್ನ ಮಕ್ಕಳಿಗೆ, ಅವರ ಬೆಳವಣಿಗೆಯಲ್ಲಿ ಯಾವ ರೀತಿ ಎಚ್ಚರಿಕೆಯನ್ನು ವಹಿಸುತ್ತಿದ್ದಾಳೆ ಎಂಬುದು ಕೂಡ ಗಮನಾರ್ಹವಾಗಿದೆ. ಇಂತಹ ವಿಚಾರವನ್ನು ಈಗಿನ ತಂದೆ-ತಾಯಿಗಳು ತಮ್ಮ ಮಕ್ಕಳಲ್ಲಿ ಆಸಕ್ತಿವಹಿಸಲು ಮುಂದಾಗಬೇಕೆಂದು ಕವಿಯು ಈ ಮೂಲಕ ಎಚ್ಚರಿಕೆಯನ್ನು ನೀಡುತ್ತಿದ್ದಾರೆ.

ಮಕ್ಕಳಿಗಂತು ಕಥೆ ಕೇಳುವುದೆಂದರೆ ಅದರಲ್ಲೂ ಇಂತಹ ಕಾಗಕ್ಕ-ಗುಬ್ಬಕ್ಕನ ಕಥೆಗಳೆಂದರೆ ಎಲ್ಲಿಲ್ಲದ ಆಸಕ್ತಿವಹಿಸುತ್ತಾರೆ. ಬೇಕಾದರೆ ಊಟ, ನಿದ್ರೆ, ಎಲ್ಲವನ್ನು ಬಿಟ್ಟು ಕೇಳುತ್ತಾರೆ. ಹೇಳುವಂತಹ ಹೇಗಿದ್ದರೂ ಸರಿಯೇ ಹುಲಿ, ಸಿಂಹ ಮಾತನಾಡುತ್ತವೆ. ಕಾಗೆ, ಗೂಬೆ ಹಾಡುತ್ತವೆ ಎಂದು ಹೇಳಿದರು ನಂಬುವಂತಹ ಮುಗ್ಧ ಮನಸ್ಸು ಅವರದ್ದಾಗಿರುತ್ತದೆ.

ಆದ್ದರಿಂದಲೇ ಮಕ್ಕಳಿಗೆ ಹೇಳುವಂತಹ ಪ್ರತಿಯೊಂದು ವಿಷಯಗಳನ್ನು ಎಚ್ಚರವಹಿಸಿಯೇ ಹೇಳಬೇಕಾಗುತ್ತದೆ. ಏಕೆಂದರೆ ಮಕ್ಕಳು ಕೆಲವು ವಿಷಯಗಳನ್ನು, ಆಡುವಂತಹ ಮಾತುಗಳನ್ನು ಗಮನಕೊಟ್ಟು ಕೇಳಬಹುದು ಅಥವಾ ಕೇಳದಯೇ ಇರಬಹುದು. ಮಕ್ಕಳ ಮನಸ್ಸು ಅತೀ ಸೂಕ್ಷ್ಮವಾಗಿರುವುದರಿಂದ ಅವರು ಬೆಳೆಯುವವರೆಗೂ ಎಚ್ಚರಿಕೆ ವಹಿಸಬೇಕೆಂದು ಈ ಕೃತಿಯ ಮೂಲಕ ತಿಳಿಯಲಾಗಿದೆ.

---

೧. ಕುವೆಂಪು, ನರಿಗಳಿಗೇಕೆ ಕೋಡಿಲ್ಲ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ೧೯೬೭, ಪು. ೫.

ಇನ್ನು 'ಶಿಶುಗೀತಾಂಜಲಿ' ಕೃತಿಯನ್ನು ಗಮನಿಸುವುದಾದರೆ ಇದರಲ್ಲಿ ಮುಖ್ಯವಾಗಿ ಮಗುವಿಗೆ ಬರುವ ಸಂದೇಹ, ಆಶ್ಚರ್ಯವನ್ನು ವ್ಯಕ್ತಪಡಿಸುತ್ತದೆ. ಜೊತೆಗೆ ಬಂದಿರುವಂತಹ ಅನುಮಾನಗಳನ್ನು ಪ್ರಶ್ನೆಯ ಮೂಲಕ ತಾಯಿಯನ್ನು ಕೇಳಿ ಉತ್ತರವನ್ನು ಕಂಡುಕೊಳ್ಳುತ್ತದೆ. ಇಂತಹ ಸಂದರ್ಭದಲ್ಲಿ ತಾಯಿ-ಮಗುವಿನ ನಡುವೆ ನಡೆಯುವಂತಹ ಮಾತುಕತೆಗಳು ಇಲ್ಲಿ ಗಮನಾರ್ಹವಾಗಿದೆ.

ಇದರಲ್ಲಿ ಬರುವ ಅನೇಕ ಕವನಗಳನ್ನು ನೋಡಿದಾಗ ನಾವು ದಿನನಿತ್ಯ ನೋಡುವಂತಹ ವಸ್ತುಗಳನ್ನು, ಪ್ರಕೃತಿಯಲ್ಲಿ ಒಂದಾದಂತಹ ಸೂರ್ಯ, ಚಂದ್ರ, ಮಳೆ, ಬಿಸಿಲು, ಮೋಡ, ಹೂ, ಮರ, ಗಿಡ ಇವುಗಳನ್ನೇ ನೋಡಿ ಮಗುವು ಆಶ್ಚರ್ಯದಿಂದ ತನ್ನ ತಾಯಿಯ ಬಳಿ ಪ್ರಶ್ನೆಗಳನ್ನು ಮುಗ್ಧತನದಿಂದ ಕೇಳುತ್ತದೆ. ಅದಕ್ಕೆ ತಕ್ಕಂತೆ ಅದರ ತಾಯಿಯು ಉತ್ತರದ ಮೂಲಕ ನೀಡುವ ಪ್ರತಿಕ್ರಿಯೆಯನ್ನು ಕುವೆಂಪು ತುಂಬ ಸುಂದರವಾಗಿ ಚಿತ್ರಿಸಿದ್ದಾರೆ.

"ದೇವರ ಪೆಪ್ಪರಮೆಂಟೇನಮ್ಮಾ
ಗಗನದೊಳಲೆಯುವ ಚಂದಿರನು?
ಎಷ್ಟೇ ತಿಂದರು ಖರ್ಚೇ ಆಗದ
ಬೆಳೆಯುವ ಪೆಪ್ಪರಮೆಂಟಮ್ಮಾ!
ಅಕ್ಷಯವಾಗಿಹ ಪೆಪ್ಪರಮೆಂಟದು
ನನಗೂ ದೊರಕುವುದೇನಮ್ಮಾ?
ನೀನೂ ದೇವರ ಬಾಲಕನಾಗಲು
ನಿನಗೂ ಕೊಡುವನು, ಕಂದಯ್ಯ!"[೧]

ಈ ಮೇಲಿನ ಕವನದಲ್ಲಿ ಒಬ್ಬ ಪುಟ್ಟ ಬಾಲಕ ಆಕಾಶದಲ್ಲಿರುವ ಚಂದ್ರನನ್ನು ದೇವರ ಪೆಪ್ಪರಮೆಂಟಾಗಿ ಕಂಡು ಆ ಪೆಪ್ಪರಮೆಂಟನ್ನು ಎಷ್ಟೇ ತಿಂದರು ಕೂಡ ಖರ್ಚೇ ಆಗುವುದೇ ಇಲ್ಲವಾ! ಎಂದು ತನ್ನ ತಾಯಿಯನ್ನು ಆಶ್ಚರ್ಯವಾಗಿ ಕೇಳುತ್ತದೆ. ಅದಕ್ಕೆ ಅಮ್ಮನು ಉತ್ತರವಾಗಿ ದೇವರ ಮಗು ನೀನಾದರೆ ನಿನಗೂ ಕೊಡುವನು ಎಂದು ಆ ಪುಟ್ಟ ಬಾಲಕನಿಗೆ ಉತ್ತರಿಸುತ್ತಾಳೆ.

ಮಕ್ಕಳಲ್ಲಿ ಇಂತಹ ಪ್ರಶ್ನಿಸುವ, ಆಲೋಚಿಸುವ ಮನೋಭಾವನೆ ಬೆಳೆದರೆ ಅವರ ಬುದ್ಧಿಶಕ್ತಿ ಚುರುಕುಗೊಳ್ಳುತ್ತದೆ. ಇಂತಹ ಹಲವು ಅಂಶಗಳನ್ನು ಇವರ ಕವನಗಳಲ್ಲಿ ಕಾಣಬಹುದು.

---

೧. ದೇ.ಜ.ಗೌ., ಜಿ.ಎಸ್.ಶಿವರುದ್ರಪ್ಪ, ಪ್ರಧಾನ್ ಗುರುದತ್ತ, ಕುವೆಂಪು ಸಂಚಯ, ಕುವೆಂಪು ಭಾಷಾಭಾರತಿ ಪ್ರಾಧಿಕಾರ, ಬೆಂಗಳೂರು, ೨೦೦೯, ಪು. ೩೬೧.

"ದೇವರ ಬಾಲಕನಾಗಲು ಒಲ್ಲೆ:
ಆತನ ಮೀರಿಹೆ ನೀನಮ್ಮಾ!
ತಾಯಿಯನಗಲಿಸಿ ದೇವರ ಹಿಡಿಸುವ
ಪೆಪ್ಪರಮೆಂಟೂ ಬೇಡಮ್ಮಾ!"[೧]

ತಾಯಿಯಿಂದ ಉತ್ತರವನ್ನು ಪಡೆದ ಮಗು ಅದಕ್ಕೆ ಪ್ರತ್ಯುತ್ತರವಾಗಿ ಈ ಮೇಲಿನ ಮಾತುಗಳನ್ನು ಆಡುತ್ತದೆ. ಅಂದರೆ, ಇಲ್ಲಿ ಮಗು ಆ ಸಿಹಿ ಪದಾರ್ಥಕ್ಕೆ ಆಕರ್ಷಿತವಾಗಿ ಆಸೆಪಟ್ಟಿದ್ದರು ಕೂಡ ತನ್ನ ತಾಯಿಯನ್ನು ದೂರ ಮಾಡಿಕೊಂಡು ಆ ಪೆಪ್ಪರಮೆಂಟನ್ನು ಪಡೆಯುವ ಆಲೋಚನೆ ಆ ಬಾಲಕನಿಗೆ ಇಲ್ಲದ್ದಾಗಿದೆ. ತನ್ನ ತಾಯಿಯ ಪ್ರೀತಿ-ವಾತ್ಸಲ್ಯಕ್ಕೆ ಯಾವುದೂ ಸರಿಸಮಾನವಲ್ಲ ಎಂಬ ಅಂಶದ ಮೂಲಕ ತನ್ನ ತಾಯಿಯ ಅಗಲಿಕೆ ಮಗುವಿಗೆ ಬೇಸರವನ್ನುಂಟು ಮಾಡಿದೆ ಎಂಬುದನ್ನು ಈ ಕವನದಲ್ಲಿ ತಿಳಿಯುವುದರ ಜೊತೆಗೆ 'ತಾಯಿ'ಗೆ ಇಲ್ಲಿ ಅತೀ ಹೆಚ್ಚಿನ ಮಟ್ಟದ ಪ್ರಾಮುಖ್ಯತೆ ನೀಡಿರುವುದನ್ನು ಅರಿಯಬಹುದಾಗಿದೆ.

ಏಕೆಂದರೆ, ತಾಯಿಗೆ ಸರಿಸಮಾನವಾದದ್ದು ಮತ್ತೊಂದಿಲ್ಲ. 'ತಾಯಿಯೇ ಮೊದಲ ಗುರು'. ಹಾಗಾಗಿ, ಇಲ್ಲಿ ಒಂದು ಮಗುವಿಗೆ ಕೇವಲ ತಾಯಿಯಾಗಿ ಮಾತ್ರವಲ್ಲದೆ ಒಬ್ಬ ಗುರುವಾಗಿ, ಸ್ನೇಹಿತೆಯಾಗಿ ಮಗು ಕೇಳುವ ಪ್ರತಿಯೊಂದು ಪ್ರಶ್ನೆಗಳಿಗೆ ತಾಳ್ಮೆಯಿಂದ, ಜಾಣ್ಮೆಯಿಂದ ಉತ್ತರವನ್ನು ನೀಡುತ್ತಾಳೆ.

"ತಿಂಡಿಯನು ಕೊಡು, ತಾಯೆ, ಹೇಳಿದುದ ಮಾಡುವೆನು:
ಬೇಕಾದುದೆಲ್ಲವನು ನೀಡುವೆನು ನಿನಗೆ!

ಮೂಡುತಿಹ ಚಂದಿರನ ಸೆರೆಹಿಡಿದು ತಂದು
ಕೊಡುವೆನು ನಿನ್ನ ಮಾಂಗಲ್ಯದಲಿ ಇಂದು
ಮಿಣುಕುತಿಹ ತಾರೆಗಳನೆಲ್ಲವನು ಕೊಯ್ದು
ಮಣಿಮಾಲೆಗಳ ಮಾಡುವೆನು ನಿನಗೆ ನೆಯ್ದು
ಮಳೆಬಿಲ್ಲುಗಳನೆಲ್ಲ ಹಿಡಿದೆಳೆದು ತಂದು
ನೆಯ್ಯುವೆನು ನಿನಗೊಂದು ಸೀರೆಯನು ಇಂದು
ಏಳು ಕಡಲನು ದಾಡಿ, ಏಳು ಗಿರಿಗಳ ನೆಗೆದು
ಕೂದಲಿಗೆ ತಹೆ ತೈಲದಂಬುಧಿಯ ಮೊಗೆದು
ಏನು ಬೇಕದ ಹೇಳು! ವೈಕುಂಠ ಬೇಕೆ?

---

೧. ದೇ.ಜ.ಗೌ., ಜಿ.ಎಸ್.ಶಿವರುದ್ರಪ್ಪ, ಪ್ರಧಾನ್ ಗುರುದತ್ತ, ಕುವೆಂಪು ಸಂಚಯ, ಕುವೆಂಪು ಭಾಷಾಭಾರತಿ ಪ್ರಾಧಿಕಾರ, ಬೆಂಗಳೂರು, ೨೦೦೮, ಪು. ೩೬೧.

ತಳಿವ ಬೆಳ್ಳಿಯ ಬೆಟ್ಟ ಕೈಲಾಸ ಬೇಕೆ?
ಚಲಿಸದಾ ಹಿಮಗಿರಿಯು ಬೇಕೇನು ಹೇಳು"[೧]

ಒಂದು ಪುಟ್ಟ ಮಗುವು ತಿಂಡಿಗೋಸ್ಕರ ತನಗೆ ಸಾಧ್ಯವಾಗದ ಕೆಲಸವನ್ನು ಮಾಡುತ್ತೇನೆಂದು ಧೈರ್ಯದಿಂದ ತನ್ನ ಅಮ್ಮನ ಬಳಿ ಹೇಳುತ್ತಿರುವುದನ್ನು ನೋಡಿದರೆ ಅಷ್ಟು ಚಿಕ್ಕ ವಯಸ್ಸಿಗೆ ಇರುವಂತಹ ಧೈರ್ಯವನ್ನು ಮೆಚ್ಚಲೇಬೇಕಾಗುತ್ತದೆ. ಮುಂದೆ ಇದೇ ಮಗು ತನ್ನ ಅಮ್ಮನು ತಿಂಡಿಕೊಡಲೆಂದು ಚಂದಿರನನ್ನು ಹಿಡಿದು ತನ್ನ ತಾಯಿಯ ಮಾಂಗಲ್ಯದಲ್ಲಿ ಇಟ್ಟು, ತಾರೆಗಳನ್ನು ಮಣಿಮಾಲೆಗಳಾಗಿ ಮಾಡಿ, ಮಳೆಬಿಲ್ಲಿನ ಮೂಲಕ ಸೀರೆಯನ್ನು ನೇಯ್ದು, ಏಳು ಗಿರಿ, ಕಡಲನು ದಾಟಿ ನಿನಗೆ ಬೇಕಾದುದನ್ನು ತಂದುಕೊಡುವೆ ಎಂದು ಹೇಳುತ್ತದೆ.

ಇದಷ್ಟೇ ಅಲ್ಲದೆ ವೈಕುಂಠ, ಕೈಲಾಸ ಬೇಕೆ? ಎಂದು ಪ್ರಶ್ನಿಸುತ್ತದೆ. ಇದರಲ್ಲೇ ತಿಳಿಯುತ್ತದೆ ಮಗುವಿನದು ಎಂತಹ ಮುಗ್ಧ ಮನಸ್ಸೆಂದು. ಏಕೆಂದರೆ, ವೈಕುಂಠ ಕೈಲಾಸಗಳು ಏನು? ಹೇಗಿರುತ್ತದೆ? ಎಂಬುದು ನಮ್ಮಂತಹ ದೊಡ್ಡವರಿಗೆ ತಿಳಿಯದ ಮಾತಾಗಿದೆ. ಅದರೆ, ಇಲ್ಲಿ ಕವಿಯು ಒಂದು ಪುಟ್ಟ ಬಾಲಕನ ಮೂಲಕ ಹೇಳಿಸಿದ್ದಾರೆ. ಈ ವೈಕುಂಠ, ಕೈಲಾಸಗಳೆಂಬುದು ಮಕ್ಕಳ ಆಲೋಚನೆಗೆ ಮೀರುವಂತಹದ್ದಾಗಿದೆ. ಆದರೂ ಇದನ್ನು ಕವಿ ಇಲ್ಲಿ ಬಳಸಿರುವುದು ಅಷ್ಟೊಂದು ಸಮಂಜಸವಲ್ಲವೆಂಬುದು ನನ್ನ ಅಭಿಪ್ರಾಯವಾಗಿದೆ.

ಕುವೆಂಪುರವರ ಮಹಾದಾಸೆಗಳಲ್ಲಿ ಒಂದು ಮುಖ್ಯವಾಗಿರುವುದು ಏನೆಂದರೆ, ಪ್ರತಿಯೊಬ್ಬರು ಕೂಡ ತನ್ನ ಭಾಷೆ ಮತ್ತು ದೇಶದ ಬಗ್ಗೆ ಅಭಿಮಾನ, ಗೌರವಗಳನ್ನು ಇಟ್ಟುಕೊಳ್ಳಬೇಕು. ಇಂತಹ ಗುಣಗಳನ್ನು ಮಗುವಿನಲ್ಲೂ ಬೆಳೆಸಬೇಕೆಂದು ಅವರ ಆಶಯವಾಗಿತ್ತು. ಆದ್ದರಿಂದಲೇ ಕುವೆಂಪು ತಮ್ಮ ಕವಿತೆಗಳ ಮೂಲಕ ಮಕ್ಕಳಲ್ಲಿ ತಾಯ್ನುಡಿ-ತಾಯ್ನಾಡಿನ ಬಗ್ಗೆ ಅಭಿಮಾನ ಬೆಳೆಸುವಂತಹ ಕವಿತೆಗಳನ್ನು ರಚಿಸಿದ್ದಾರೆ.

"ಏಳಿರೈ! ಬಾಲರೇ! ದೇಶಸೇವೆಗೈಯುವ!
ಕೇಳಿರೈ! ಕೇಳಿರೈ! ತಾಯಗೋಳ ರೋದನ!

ಧೂಳಗಿದೆ ಜನನಿಯ ಮುಖ
ಹಾಳಾಗಿದೆ ಜನನಿಯ ಸುಖ!

ಏಳಿ! ಏಕೆ ಜಡತನ?
ಏಳಿ! ಸಾಕು ಬಡತನ!

---

೧. ಕುವೆಂಪು, ಮರಿವಿಜ್ಞಾನಿ, ಉದಯರವಿ ಪ್ರಕಾಶನ, ವಾಣಿವಿಲಾಸಮರಂ, ೧೯೬೬, ಮೈಸೂರು, ಪು. ೧.

ವೀರಶಿವನ ಮರೆತಿರುವಿರ?
ಧೀರತನವ ತೊರೆದಿರುವಿರ?

ಏಳಿ, ಅಮೃತಪುತ್ರರೆ!
ಏಳಿ, ಆನಂದಾತ್ಮರೆ!"[೧]

ಈ ರೀತಿಯಾಗಿ ದೇಶ-ಭಾಷೆಗಳ ಬಗ್ಗೆ ಅಭಿಮಾನವನ್ನು ಇಟ್ಟುಕೊಂಡೇ ಪ್ರತಿಯೊಬ್ಬರು ಬದುಕಬೇಕು. ನಮ್ಮ ನಮ್ಮ ತಾಯ್ನಾಡು-ತಾಯ್ನುಡಿಯನ್ನು ಎಂದಿಗೂ ಅದರ ಸ್ಥಾನವನ್ನು ಬಿಟ್ಟುಕೊಡಬಾರದೆಂದು ಮಕ್ಕಳಿಗೆ ಈ ಕವನದ ಮೂಲಕ ತಿಳಿಸುತ್ತಿದ್ದಾರೆ.

'ಮೂರ್ತಿ' ಎಂಬ ಪುಟ್ಟ ಬಾಲಕನು ಪ್ರಕೃತಿಯಲ್ಲಿ ಒಂದಾದಂತಹ 'ಮಿಂಚು, ಗುಡುಗು, ಮಳೆ ಇವುಗಳನ್ನು ತಾನೇ ಪರಿಚಯ ಮಾಡಿಕೊಳ್ಳಲು ಪ್ರಯತ್ನಪಡುತ್ತಾನೆ. ಒಂದೊಂದನ್ನು ಒಂದೊಂದು ರೀತಿಯಾಗಿ ಆಲೋಚಿಸುತ್ತಾನೆ. ಕೊನೆಗೆ ತನಗೆ ತಾನೇ ಪ್ರಶ್ನೆಗಳನ್ನು ಹಾಕಿಕೊಂಡು ತನಗನಿಸಿದ ಉತ್ತರವನ್ನು ತಾನೇ ಕಂಡುಕೊಳ್ಳುತ್ತಾನೆ. ಆದ್ದರಿಂದ ಕವಿಯು ಈತನನ್ನು 'ಮರಿವಿಜ್ಞಾನಿ' ಎಂದು ಕರೆದಿರುವುದು ಸರಿಯಾಗಿಯೇ ಇದೆ.

ಇಲ್ಲಿ ಬರುವ ಅನೇಕ ಕವನಗಳು 'ಮೂರ್ತಿ' ಎಂಬ ಹೆಸರಿನಿಂದಲೇ ರಚಿತವಾಗಿದೆ. ಅದಕ್ಕೆ ಕಾರಣವನ್ನು ಕುವೆಂಪುರವರು ತಮ್ಮ ಆತ್ಮಕಥನ ನೆನಪಿನ ದೋಣಿಯಲ್ಲಿ ತಿಳಿಸಿದ್ದಾರೆ.

"ಇಲ್ಲಿ ಮತ್ತೆ ಮತ್ತೆ ಬರುವ ಮಗುವಿನ ಹೆಸರು 'ಮೂರ್ತಿ' ನಾ ಕಸ್ತೂರಿಯವರ ಮೊದಲನೆಯ ಮಗುವಾಗಿದ್ದು, ಅವನು ಆಶ್ರಮದ ಪಕ್ಕದಲ್ಲಿಯೇ ಇದ್ದ ಅವರ ಮನೆಯಿಂದ ತನ್ನ ತಂದೆಯೊಡನೆ ಆಶ್ರಮಕ್ಕೆ ಬಂದು ತೊದಲು ಮಾತಿನಿಂದಲೂ ಮಕ್ಕಳಾಟದಿಂದಲೂ ಆಶ್ರಮದ ಆಧ್ಯಾತ್ಮಿಕ ಭಾರದ ಗುರುತ್ವಕ್ಕೆ ತುಸು ಲೌಕಿಕ ವಿನೋದದ ಮತ್ತು ಲಘುತ್ವದ ಹರ್ಷವನ್ನುಂಟು ಮಾಡುತ್ತಿದ್ದನು"[೨] ಎಂದು ತಿಳಿಸಿದ್ದಾರೆ.

ಹಾಗಾಗಿ ಮಕ್ಕಳಲ್ಲಿ ಈ ರೀತಿಯ ಪ್ರಶ್ನೆ ಕೇಳುವ ಮನೋಭಾವ, ಕುತೂಹಲ, ಆಲೋಚನೆಯನ್ನು ಪುಟ್ಟ ವಯಸ್ಸಿನಲ್ಲಿಯೇ ಬೆಳೆಸಿಕೊಳ್ಳಬೇಕಾದ ಮೌಲ್ಯಗಳಾಗಿವೆ.

ಇದೇ ರೀತಿಯಲ್ಲಿ 'ಗುರು' ಎಂಬ ಕವಿತೆಯಲ್ಲೂ ಕೂಡ ಮೂರ್ತಿಯು 'ಸಂಪಿಗೆ' ಹಣವನ್ನು ಸಂಪಿಗೆ ಎಂದು ಕರೆಯಲು ಇಷ್ಟವಾಗದೆ 'ತಂಪಿಗೆ' ಎಂದು ಕರೆಯಲು ಇಚ್ಛಿಸುತ್ತಾನೆ. ಅದಕ್ಕೆ ತಕ್ಕಂತೆ ಅವನ ತಂಗಿ-ತಾಯಿಯು ಕೂಡ ಹಾಗೆಯೇ ಕರೆಯಲು

---

೧. ಕುವೆಂಪು, ಮೇಘಪುರ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ೧೯೬೬, ಮೈಸೂರು, ಪು. ೭.

೨. ಕುವೆಂಪು, ನೆನಪಿನ ದೋಣಿಯಲ್ಲಿ ೧, ಸಹ್ಯಾದ್ರಿ ಪ್ರಕಾಶನ, ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು, ೧೯೮೦, ಪು. ೭೧೧.

ಒಪ್ಪುತ್ತಾರೆ. ಇಲ್ಲಿ ಹೂವಿಗೆ ಇರುವಂತಹ ಹೆಸರನ್ನು ಬದಲಿಸಬೇಕೆಂದು ಸಲಹೆ ನೀಡುತ್ತಾನೆ. ತನ್ನ ಮಗನ ಮನಸ್ಸಿಗೆ ನೋವಾಗಬಾರದೆಂದು ತಿಳಿದು ತಾನು ಹಾಗೆಯೇ ಕರೆಯಲು ಒಪ್ಪುತ್ತಾಳೆ. ಕೊನೆಗೆ ತನ್ನ ಮಗನನ್ನೇ 'ಗುರು' ಎಂದು ಹೇಳಿ ಅವನಿಗೆ ಸಂತೋಷಪಡಿಸುತ್ತಾಳೆ.

"ಆಗಲಿ! ನಾನೂ ತಂಪಿಗೆ ಎಂಬೆನು,
ನನಗೂ ತಂಗಿಗೂ ನೀನೆ ಗುರು!"[೧]

ಹೀಗೆ ಕವಿಯು 'ಹಣ, ಒಡವೆ' ಎಂಬ ಕವನಗಳ ಮೂಲಕ ಮಕ್ಕಳಿಗೆ ಒಳ್ಳೆಯ ಅಂಶಗಳನ್ನು ತಿಳಿಸಲು ಪ್ರಯತ್ನಿಸಿದ್ದಾರೆ. ಶ್ರೀಮಂತಿಕೆಯ ವಸ್ತುಗಳಾದ ಹಣ ಮತ್ತು ಒಡವೆಗಳಿಗೆ ನೀಡುತ್ತಿರುವ ಪ್ರಾಮುಖ್ಯತೆಯ ಬಗ್ಗೆ ತಿಳಿಸಿ ಇದರಿಂದಲೇ ಮನುಷ್ಯ ಬದುಕಲು ಸಾಧ್ಯವಿಲ್ಲ. ನಂಬಿಕೆ, ಪ್ರೀತಿ, ಪ್ರೇಮ, ಗೌರವ ಇವುಗಳಿದ್ದರೆ ಜೀವನವನ್ನು ನೆಮ್ಮದಿಯಿಂದ ಮುಂದೆ ಸಾಗಿಸಲು ಸಾಧ್ಯವಾಗುತ್ತದೆ. ಹಣ-ಒಡವೆ-ಆಸ್ತಿಗಳಿಗೆ ಪ್ರಾಮುಖ್ಯತೆ ಕೊಡುವ ಮನುಷ್ಯ ನೆಮ್ಮದಿಯಿಂದಿರಲು ಸಾಧ್ಯವಾಗುವುದಿಲ್ಲ ಎಂಬುದನ್ನು 'ಒಡವೆ' ಎಂಬ ಕವನದಲ್ಲಿ ತಾಯಿ ಮಗುವಿನ ಪರಸ್ಪರ ಪ್ರೀತಿ ತೋರಿಸುವಲ್ಲಿ ತಮಗೆ ತಾವೇ ಒಡವೆಗಳಾಗಿದ್ದು 'ಪ್ರೀತಿ' ಎಂಬ ಒಡವೆಯೇ ಸಾಕೆಂದು ಆ ಪುಟ್ಟ ಬಾಲಕ ಹೇಳಿದ್ದಾನೆ.

ಕುವೆಂಪು ಅವರು 'ರುಗ್ಣಶಯ್ಯೆಯ ಮೇಲೆ ಕುಳಿತೇ ರಚಿಸಿದ್ದ ದೀರ್ಘ ಕವನವೆಂದರೆ 'ಹಾಳೂರು'. ಅದು 'ಗೋಲ್ಡ್‌ಸ್ಮಿತ್' ಕವಿಯ 'ಡೆಸೆರ್ಟೆಡ್ ವಿಲೇಜ್'ನ ಭಾಷಾಂತರವೂ ಅಲ್ಲ, ಸರಳಾನುವಾದವೂ ಅಲ್ಲ. ಆಗ ನನ್ನ ಬಳಿ ಆ ಪುಸ್ತಕವೂ ಇರಲಿಲ್ಲ. ಅದನ್ನು ಹಿಂದೆ ಓದಿದರ ಪ್ರಭಾವೆಷ್ಟೊ ಅಷ್ಟೆ. ಸಂಪೂರ್ಣವಾಗಿ ನಮ್ಮ ಹಳ್ಳಿಯ ಜೀವನ ಮತ್ತು ಹಳ್ಳಿಗಳಿಂದ ಪೇಟೆಗೆ ಬಂದು ನೆಲೆಸುತ್ತಿದ್ದ ಹಳ್ಳಿಗರ ಧಾರುಣವಾದ ಬದುಕು ಇವುಗಳನ್ನು ಕುರಿತದ್ದು"ಎಂದು ಕುವೆಂಪು ಅವರೇ ಸ್ವತಃ ತಮ್ಮ 'ನೆನಪಿನ ದೋಣಿಯಲ್ಲಿ' ಹೇಳಿಕೊಂಡಿದ್ದಾರೆ.[೨]

ಈ 'ಹಾಳೂರು' ಕವಿತೆಯು ೧೯೨೬ರಲ್ಲಿ ಪ್ರಕಟಗೊಂಡಿದೆ. ಇದು ಕೇವಲ ಮಕ್ಕಳಿಗಷ್ಟೇ ಅಲ್ಲದೆ ಪ್ರತಿಯೊಬ್ಬರಿಗೂ ಅಗತ್ಯವೆನಿಸುತ್ತದೆ.

---

೧. ಕುವೆಂಪು, ಶಿಶುಗೀತಾಂಜಲಿ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೪೬, ಪು. ೯.

೨. ಕುವೆಂಪು, ನೆನಪಿನ ದೋಣಿಯಲ್ಲಿ ೧, ಸಹ್ಯಾದ್ರಿ ಪ್ರಕಾಶನ, ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು, ೧೯೮೦, ಪು. ೬೯೮.

ನಮ್ಮ ಭಾರತ ದೇಶವು ಹಳ್ಳಿಗಳಿಂದ ಕೂಡಿದಂತಹ ನಾಡಾಗಿದ್ದು ಆ ಗ್ರಾಮೀಣ ಪ್ರದೇಶದಲ್ಲಿ ಇರುವಂತಹ ಜನರ ಬದುಕು-ಕಷ್ಟಗಳು ಇದೆಲ್ಲದರ ದುರಂತ ಕಥೆಯನ್ನು ನೋಡುವುದರ ಜೊತೆಗೆ ಇಂತಹ ದುರಂತಕ್ಕೆ ಕಾರಣವಾದ ನಗರಗಳು ಅಲ್ಲಿನ ನಾಗರಿಕತೆಯೇ ಇದಕ್ಕೆ ಕಾರಣ ಎಂಬುದನ್ನು ಕುವೆಂಪು ಅವರು 'ಹಾಳೂರು' ಕವಿತೆಯಲ್ಲಿ ಚಿತ್ರಿಸಿದ್ದಾರೆ.

"ನಮ್ಮೂರೆ, ಹಾಳೂರೆ, ಎಲೆ ಮುದ್ದುಹಳ್ಳಿ,
ನಿನ್ನಡಕೆ ತೋಟಗಳು ವನಗಳೀಗೆಲ್ಲಿ?
ನಲಿವ ಹೊಲಗದ್ದೆಗಳ ಸೌಂದರ್ಯವೆಲ್ಲಿ?
ನಿನ್ನ ಜೀವದ ಸಿರಿಯ ಲಾವಣ್ಯವೆಲ್ಲಿ?
ಸುಖದಿ ಜೀವಿಸುತ್ತಿದ್ದ ನಿನ್ನ ಜನರೆಲ್ಲಿ?
ಹಾಳಾಗಿ ಹೋದೆಯಾ, ಹಾ ಮುದ್ದುಹಳ್ಳಿ!
ನಿನ್ನ ಗುಡಿ ಗೂಬೆಗಳಿಗಾಯಿತಾವಾಸ;
ನಿನ್ನನಿರದಾವರಿಸಿತು ಮಹಾ ವಿನಾಶ!"[೧]

ಈ ಮೇಲಿನ ಕವನದಲ್ಲಿರುವ ಸಾಲುಗಳನ್ನು ಕವಿಯು ತುಂಬಾ ನೋವಿನಿಂದ ಹೇಳುವಂತಿದೆ. ಪ್ರಕೃತಿ ಮಡಿಲಿನಲ್ಲಿದ್ದ ಆ ಹಳ್ಳಿಯ ಜೀವನವೆಲ್ಲಿ ಅಲ್ಲಿದ್ದಂತಹ ಸುಂದರವಾದ ಅಡಕೆ ತೋಟ, ಹೊಲ-ಗದ್ದೆಗಳೆಲ್ಲಿ, ಇದೆಲ್ಲದರ ಸುಖವನ್ನು ಅನುಭವಿಸುತ್ತಿದ್ದ ಹಳ್ಳಿಯ ಜನರೆಲ್ಲಿ ಎಂದು ಕೂಗಿ-ಕೂಗಿ ಕೇಳುವ ಪರಿಸ್ಥಿತಿ ಉಂಟಾಗಿದೆ. ಪಟ್ಟಣದ ಆಮಿಷಕ್ಕೆ ನಮ್ಮ ಹಳ್ಳಿಗಳು ಒಳಗಾಗಿ ಇಂತಹ ದುರಂತಕ್ಕೆ ಕಾರಣವಾಗಿದೆ ಎಂಬುದನ್ನು ಮಕ್ಕಳಿಗೆ ತಿಳಿಸುತ್ತಿದ್ದಾರೆ.

ಹಳ್ಳಿಯಲ್ಲಿರುವ ಪ್ರತಿಯೊಬ್ಬ ರೈತನು ದೇಶದ ಬೆನ್ನೆಲುಬು ಹಾಗೂ ದೇಶದ ಅನ್ನದಾತ ಕೂಡ. ಇಂತಹ ರೈತರು, ಇವರ ಮಕ್ಕಳು ಹಳ್ಳಿಗಳನ್ನು ತೊರೆದು ನಗರಗಳು ಆಕರ್ಷಿಸುತ್ತಿರುವ ಕಡೆಗೆ ಮುಖ ಮಾಡಿ ನಿಂತಿದ್ದಾರೆ. ಇಂತಹ ಅನರ್ಥಗಳನ್ನು ತಡೆಯಬೇಕು ಹಳ್ಳಿಯ ಜನ ತಮ್ಮ ತಮ್ಮ ಹಳ್ಳಿಗಳಿಗೆ ಹಿಂತಿರುಗಬೇಕು ಎಂಬ ಕಿವಿಮಾತನ್ನು ಕುವೆಂಪು ಹೇಳುತ್ತಿದ್ದಾರೆ.

ಏಕೆಂದರೆ, ಹಳ್ಳಿ ಜೀವನವೆಂದರೆ ಮೊದಲಿನಿಂದಲೂ ಸುಖೀ ಜೀವನವೇ ಪಟ್ಟಣ ಜೀವನವು ಯಾವಾಗಲೂ ಜಂಜಾಟದ ಬದುಕಾಗಿರುತ್ತದೆ. ಅಲ್ಲಿ ಯಾವಾಗಲೂ ದರೋಡೆ,

---

೧. ಕುವೆಂಪು, ಹಾಳೂರು, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೬, ಪು. ೨೦.

ಮೋಸ, ಸುಳ್ಳು, ಸುಲಿಗೆ ಎಂಬುದರಲ್ಲೇ ಜೀವನ ಸಾಗುತ್ತಿರುವುದರಿಂದ ಅವರಿಗೆ ಜೀವನದಲ್ಲಿ ಸುಖವೆಂಬುದೇ ಇಲ್ಲದಾಗಿದೆ. ಹಾಗೂ ಅಲ್ಲಿರುವ ಬಡಜನರಿಗೆ ಶ್ರೀಮಂತರು ದೌರ್ಜನ್ಯ ಮಾಡುವುದರ ಮೂಲಕ ಅವರನ್ನು ಕಷ್ಟದಲ್ಲಿ ಸಿಲುಕಿಸುತ್ತಾರೆ. ಆದ್ದರಿಂದ ಹಳ್ಳಿಯ ಜೀವನವೇ ತೃಪ್ತಿದಾಯಕ ಎಂದು ಹೇಳಬಹುದು. ಇಲ್ಲಿನ ನೆಮ್ಮದಿಯ ಜೀವನ ಬೇರೆಲ್ಲೂ ಸಿಗುವುದಿಲ್ಲವೆಂದು ಹೇಳಿದರೆ ತಪ್ಪಾಗಲಾರದು.

ಈ ಕವನದಲ್ಲಿ ಬರುವ ಮತ್ತೊಂದು ಮುಖ್ಯಾಂಶವೆಂದರೆ 'ನ್ಯಾಯ ಪದ್ಧತಿ'. ಹಿಂದೆ ಹಳ್ಳಿಗಳಲ್ಲಿ ಹಳ್ಳಿಯ ಜನರಿಗೆ ಯಾವುದಾದರೂ ಕಷ್ಟ, ತೊಂದರೆಗಳು ಸಂಭವಿಸಿದರೆ, ಮೋಸ ವಂಚನೆ ನಡೆದರೆ ಅದನ್ನು ಆ ಹಳ್ಳಿಯ ಪಂಚಾಯಿತಿಯಲ್ಲೇ ಆ ಊರಿನ ಗೌಡರು ಯಜಮಾನರೆಲ್ಲರೂ ಸೇರಿ ನ್ಯಾಯವನ್ನು ಒದಗಿಸುತ್ತಿದ್ದರು. ಆದರೆ, ಇಂದಿನ ದಿನಗಳಲ್ಲಿ ಈ ಪದ್ಧತಿಗಳೆಲ್ಲ ಹಿಂದೆ ಸರಿದು ಕೋರ್ಟು, ಲಾಯರು ಇವುಗಳೆಲ್ಲ ಪ್ರವೇಶಗೊಂಡಿವೆ. ಈ ನಗರಗಳಲ್ಲಿನ ನ್ಯಾಯ ಪದ್ಧತಿಯು ನ್ಯಾಯ ಒದಗಿಸಿಕೊಡುವ ಬದಲು ಬಡವರನ್ನು ಶೋಷಣೆಗೆ ಒಳಪಡಿಸುತ್ತದೆ. ಲಾಯರುಗಳು ತಮ್ಮ ವೃತ್ತಿಗೆ ತಕ್ಕಂತೆ ನ್ಯಾಯವನ್ನು ಒದಗಿಸದೆ ಹಣ ಸಂಪಾದನೆ ಮಾಡುವುದರಲ್ಲಿ ಮುಂದಾಗುತ್ತಾರೆ. ಈ ರೀತಿ ಎಲ್ಲಾ ಬಗೆಯ ಶೋಷಣೆಗೆ ಒಳಗಾದ ಹಳ್ಳಿಯನ್ನು ಕಾಪಾಡಿ ಉದ್ಧರಿಸಬೇಕೆಂದು ಕವಿಯ ಅಳಲಾಗಿದೆ.

ಇದೇ ರೀತಿ ಮಾತೃ ಭಾಷೆ, ಸ್ಥಳೀಯ ಭಾಷೆಗಳನ್ನು ಹಿಂದೆ ಸರಿಸಿ ಪರ ಭಾಷೆಯ ಮೋಹಕ್ಕೆ ಜನರು ಬಲಿಯಾಗಿರುವುದನ್ನು ಕಾಣುತ್ತೇವೆ.

"ನಾವೀಗ ಮಾತೃಭಾಷೆಯ ತಳ್ಳಿದೂರ
ಪರಭಾಷೆಯನ್ನಪ್ಪಿ ಚುಂಬಿಪೆವು ಪೂರ
ನಮ್ಮ ನಾಡಿನ ನುಡಿಯು ನಮಗೆ ಸೊಗಸಲ್ಲ
ಪರಭಾಷೆಯೆಂದರದು ನಮಗೆಲ್ಲ ಬೆಲ್ಲ
ನಮ್ಮ ಪಡೆದಿಹ ತಾಯ ತಳ್ಳಿಹೆವು ದೂರ;
ಪರಕೀಯಳೊಬ್ಬಳಿಗೆ ಹಾಕಿದೆವು ಹಾರ!
ಕರ್ಣಾಟಮಾತೆಯಾ ಮಕ್ಕಳಿರ ಕೂಡಿ
ತಾಯ್ನುಡಿಯ ಸೇವೆಯನು ಮನಸಿಟ್ಟು ಮಾಡಿ"[೧]

ಈ ಮೇಲಿನ ಕವನದಲ್ಲಿ ನಮ್ಮ ಮಾತೃಭಷೆಯನ್ನು ಬಿಟ್ಟು ಪರಕೀಯ ಭಾಷೆಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟು ಅದರ ವ್ಯಾಮೋಹಕ್ಕೆ ತುತ್ತಾಗಿದ್ದಾರೆ. ಆದರೆ ಕರ್ನಾಟಕ ಮಾತೆಯ

---

೧. ಕುವೆಂಪು, ಹಾಳೂರು, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೬, ಪು. ೫.

ಮಕ್ಕಳಾದಂತಹ ನಾವು-ನೀವು ಒಟ್ಟಿಗೆ ಕೂಡಿಕೊಂಡು ತಾಯ್ನಾಡಿನ ಸೇವೆಯನ್ನು ಮಾಡುವುದರ ಜೊತೆಗೆ ತಾಯ್ನಾಡಿನ ಬಗ್ಗೆ, ನಮ್ಮ ಭಾಷೆಯ ಬಗ್ಗೆ ಅಭಿಮಾನವನ್ನು ಬೆಳೆಸಿಕೊಳ್ಳಬೇಕು ಹಾಗೂ ಈ ಅಭಿಮಾನವನ್ನು ಮಕ್ಕಳಲ್ಲಿ ಬೆಳೆಸಬೇಕೆಂಬುದು ಈ ಕೃತಿಯ ಆಶಯವಾಗಿದೆ.

ಹೀಗೆ ನಗರ-ಪಟ್ಟಣಗಳಿಂದ ಅಲ್ಲಿನ ನಾಗರಿಕತೆಯಿಂದ ಹಳ್ಳಿಗಳು ದಿನದಿಂದ ದಿನಕ್ಕೆ ದುರಂತದ ಹಾದಿಯನ್ನು ಹಿಡಿಯುತ್ತಿರುವುದರ ಬಗ್ಗೆ ಅದನ್ನು ಮಕ್ಕಳು ತಿಳಿದುಕೊಂಡು ಎಚ್ಚರವಹಿಸಿ ತಡೆಯಬೇಕೆಂದು ಕುವೆಂಪು ಕಳಕಳಿಯಿಂದ ಕೇಳಿಕೊಳ್ಳುತ್ತಿದ್ದಾರೆ.

ಇನ್ನು ಮಕ್ಕಳ ನಾಟಕಗಳಾದಂತಹ 'ಮೋಡಣ್ಣನ ತಮ್ಮ' ಮತ್ತು 'ನನ್ನ ಗೋಪಾಲ' ಇವೆರಡರಲ್ಲೂ ಕೂಡ ಮನುಷ್ಯನಿಗೂ ಮತ್ತು ಪರಿಸರಕ್ಕೂ ಯಾವ ರೀತಿಯ ಸಂಬಂಧವಿದೆ ಎಂಬುದನ್ನು ಕಾಣಬಹುದಾಗಿದೆ. ಈ ಸಂಬಂಧ ಕೇವಲ ಇಂದಿನದ್ದಲ್ಲ ಅನಾದಿ ಕಾಲದಿಂದಲೂ ಮುಂದುವರಿದುಕೊಂಡೇ ಬಂದಿದೆ ಎಂಬ ಅಂಶವನ್ನು ತಿಳಿಯಬಹುದು.

'ಮೋಡಣ್ಣನ ತಮ್ಮ' ಎಂಬ ನಾಟಕದಲ್ಲಿ ಮಗುವು ಚಲಿಸುತ್ತಿರುವ ಮೋಡಕ್ಕೆ ಆಕರ್ಷಣೆಗೊಂಡು ಮೋಡವನ್ನೇ ತನ್ನ ಅಣ್ಣನೆಂದು ಭಾವಿಸಿಕೊಂಡು ನಿನ್ನ ಹಾಗೆಯೇ ತಾನು ಕೂಡ ಮುಗಿಲ ಬಾಲಕನಾಗಬೇಕೆಂಬ ಆಸೆಯನ್ನು ಬಿಚ್ಚಿಡುತ್ತದೆ.

> "ಬಲು ಸಂತೋಷದಿ ತೇಲುವೆಯಣ್ಣ
> ಬಳಲದೆ ಆಟವನಾಡುವೆಯಣ್ಣ
> ಮಿಂಚಿನ ಬಳಿಯೇ ನೀನಿರುವೆ;
> ಮಿಂಚಿನ ಬಳೆಯನೆ ಧರಿಸಿರುವೆ"[೧]

ಸದಾಕಾಲ ಸಂತೋಷದಿಂದ ಇರುವ ನೀನು ಮಿಂಚು, ಗುಡುಗು ಇವುಗಳ ಜೊತೆಯೇ ಆಟವಾಡುವ ನೀನು ನಿನ್ನ ಹಾಗೆ ನಾನು ಒಬ್ಬನಾಗುತ್ತೇನೆ ಎಂದು ಕೇಳಿಕೊಳ್ಳುತ್ತದೆ.

ಇಲ್ಲಿ ಮನುಷ್ಯ ಮತ್ತು ಪ್ರಕೃತಿಯ ಸಂಬಂಧ, ಸ್ನೇಹವನ್ನು ಕಾಣುವುದರ ಜೊತೆಗೆ ಆ ಪುಟ್ಟ ಬಾಲಕ ಮೋಡವನ್ನು ತನ್ನ 'ಅಣ್ಣ'ನೆಂದು ತಾನು ಅದರ 'ತಮ್ಮ'ನೆಂದು ಸಂಬಂಧವನ್ನು ಸೃಷ್ಟಿಸಿಕೊಂಡಿದೆ. ಇದರಿಂದಾಗಿ ಅಣ್ಣ-ತಮ್ಮ, ಅಕ್ಕ-ತಂಗಿಯರ ಬಾಂಧವ್ಯವನ್ನು ತಿಳಿದುಕೊಳ್ಳುವುದರ ಜೊತೆಗೆ ಇಂತಹ ಸಂಬಂಧದಲ್ಲಿರುವ ಪ್ರೀತಿ-ಪ್ರೇಮವನ್ನು ಸಹ ಗುರುತಿಸಬಹುದಾಗಿದೆ.

---

೧. ಡಾ. ದೇ.ಜ.ಗೌ, ಜಿ.ಎಸ್.ಶಿವರುದ್ರಪ್ಪ, ಪ್ರಧಾನ್ ಗುರುದತ್ತ, ಕುವೆಂಪು ಸಂಚಯ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೦೯, ಪು. ೩೬೭.

ಕೊನೆಯದಾಗಿ ಮೋಡಣ್ಣ ಆ ಮುಗ್ಧ ಮನಸ್ಸಿಗೆ ಕರುಣೆಯನ್ನು ತೋರಿಸುತ್ತಾನೆ. ಹಾಗೆಯೇ ಬುದ್ಧಿವಾದವನ್ನು ಹೇಳುತ್ತಾನೆ. ಬುದ್ಧಿಮಾತನ್ನು ಹೇಳಿದ ಮೋಡಣ್ಣ ತನ್ನ ಕೆಲಸವನ್ನು, ಕಷ್ಟವನ್ನು ಹೇಳಿಕೊಂಡಾಗ ಬಾಲಕನ ಮನಸ್ಸು ಕರಗಿ ಕ್ಷಮೆಯನ್ನು ಯಾಚಿಸುತ್ತಾನೆ.

ಮೋಡಣ್ಣನು ಕೊನೆಯಲ್ಲಿ ತನ್ನ ತಮ್ಮನಿಗೆ ಬುದ್ಧಿಮಾತುಗಳನ್ನು ಹೇಳುವ ಮೂಲಕ 'ಸತ್ಯ, ಧರ್ಮ, ಭಕ್ತಿ' ಇವುಗಳ ದರ್ಶನವನ್ನೇ ಮಾಡಿಸಿಬಿಡುತ್ತಾನೆ.

"ಸತ್ಯವನೆಂದಿಗು ಬಿಡಬೇಡ
ಮಿಥ್ಯೆಯನೆಂದೂ ಹಿಡಿಯಲು ಬೇಡ!
ಚಿತ್ತದಿ ಭಕ್ತಿಯ ಬೀಜವನು
ಬಿತ್ತುವ ಪಡೆಯೈ ಮುಕ್ತಿಯನು!
ನಿರ್ಮಲ ಮನುಜನೆ ದೇವಾಲಯವೊ;
ನಿರ್ಮಲ ಹೃದಯವೆ ದೇವರ ಪೀಠ!
ಶುದ್ಧವಾದ ಮನಸೇ ಪೂಜಾರ:
ಶುದ್ಧಾಲೋಚನೆಗಳೆ ಸುಮಹಾರ!"[೧]

ಹೀಗೆ ಸತ್ಯ ಮಿಥ್ಯ, ಭಕ್ತಿ–ಮುಕ್ತಿಗಳ ಬಗ್ಗೆ ತಿಳುವಳಿಕೆಯ ಮಾತುಗಳನ್ನು ಹೇಳಿ ದೇವರನ್ನು ನಂಬಿ ಶುದ್ಧವಾದ ಪ್ರಾರ್ಥನೆಯ ಮೂಲಕ ನಿನ್ನನ್ನು ತೊಡಗಿಸಿಕೊಳ್ಳಬೇಕು ಎಂಬ ಮಾನವೀಯ ಮೌಲ್ಯದಿಂದ ಕೂಡಿದಂತಹ ಬುದ್ಧಿಮಾತನ್ನು ಹೇಳಿ ಮೋಡಣ್ಣ ಮುಂದೆ ಸರಿಯುತ್ತಾನೆ.

ಇದೇ ರೀತಿ ದೇವರು–ಮನುಷ್ಯ–ಪರಿಸರ ಈ ಮೂರರ ಸಂಬಂಧದಿಂದ ರಚನೆಯಾಗಿರುವುದೇ 'ನನ್ನ ಗೋಪಾಲ' ಎಂಬ ನಾಟಕ. ಈ ನಾಟಕದಲ್ಲಿ 'ಭಕ್ತಿ'ಯೇ ಪ್ರಧಾನವಾದ ಅಂಶವಾಗಿದೆ. ನಿರ್ಮಲವಾದ ಭಕ್ತಿಗೆ ದೇವರು ಒಲಿಯುತ್ತಾನೆಂಬುದನ್ನು ಈ ನಾಟಕದ ಮೂಲಕ ತಿಳಿದುಕೊಳ್ಳಬಹುದಾಗಿದೆ.

ಈ ಕಥನದಲ್ಲಿ ಮಕ್ಕಳಲ್ಲಿ ಬೆಳೆಸಬಹುದಾದಮತಹ 'ಭಕ್ತಿ, ಶ್ರದ್ಧೆ, ನಿಷ್ಠೆ' ಎಂಬ ಮೌಲ್ಯದ ಜೊತೆಯಲ್ಲಿಯೇ ಮಕ್ಕಳಿಗೆ ಇರಬೇಕಾದ ತಾಯಿಯ ಮೇಲಿನ ಪ್ರೇಮ, ಗುರುವಿನ ಮೇಲೆ ಭಕ್ತಿ ಮುಖ್ಯವಾಗಿ ಕಾಣಿಸುತ್ತದೆ.

---

೧. ಡಾ. ದೇ.ಜ.ಗೌ, ಜಿ.ಎಸ್.ಶಿವರುದ್ರಪ್ಪ, ಪ್ರಧಾನ್ ಗುರುದತ್ತ, ಕುವೆಂಪು ಸಂಚಯ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೦೯, ಪು. ೩೭೩.

ದೇವರು ಬಡವ-ಬಲ್ಲಿದನೆನ್ನದೆ ನಿರ್ಮಲವಾದ ಭಕ್ತಿಗೆ ಒಲಿಯುತ್ತಾನೆ. ಅದರಲ್ಲು ನಿಷ್ಕಲ್ಮಷವಾದ ಪುಟ್ಟ ಮಕ್ಕಳಿಗಂತು ಅವನ ಕೃಪಾಕಟಾಕ್ಷ ಇದ್ದೇ ಇರುತ್ತದೆ. ಇದಕ್ಕೆ ಮುಖ್ಯವಾದ ಸಾಕ್ಷಿ ಎಂಬಂತೆ ಕುವೆಂಪು ಅವರು 'ನನ್ನ ಗೋಪಾಲ'ನನ್ನು ಚಿತ್ರಿಸಿದ್ದಾರೆ.

"ತಿಳಿವಳಿಕೆಗೆ ನಾ ಸಿಲುಕೇ ಮನುಜಾ
ಒಲುಮೆಗೆ ಸೆರೆಯಾಗುವೆನು
ತಪಸಿಗಳೆನ್ನನು ಜ್ಞಾನದಿ ಮುಟ್ಟಲು
ಯುಗಯುಗಗಳು ಬಲು ಬಳಲುವರು
ಯೋಗಿಗಳೆನ್ನು ಜನುಮ ಜನುಮದಲಿ
ಹೊಂದಲು ಸಾಧನೆ ಮಾಡುವರು
ಕಡಲಿನ ಬಿತ್ತರ ಸಾಲದು ಪವಡಿಸೆ
ಭಕ್ತಿಯ ಕಂಬನಿ ಮನೆ ಎನಗೆ
ಹಿಮಗಿರಿ ಎತ್ತರ ಸಾಲದು ನಾನಿರೆ
ಭಕ್ತನ ಹೃದಯವು ಸಾಕೆನಗೆ
ಬೃಂದಾವನದಾ ಗೋಪಿಯರರಿತರೆ
ವೇದಗಳಾಡುವ ಸತ್ಯವನು?
ಹಾಲನು ಮಾರುವ ಹೆಣ್ಣುಗಳೊಲ್ಮೆಯೆ
ಮೀರದೆ ಯೋಗಿಯ ಸಾಧನೆಯ?"[೧]

ಈ ಮಾತುಗಳನ್ನು ಕುವೆಂಪು ದೈವದ ಬಾಯಿಂದಲೇ ಹಾಡಿಸುತ್ತಾರೆ. ಎಂತೆಂಥಹ ಜ್ಞಾನಿಗಳು ತಪಸ್ವಿಗಳು ಕಾಣಲಾರದ್ದ ದೈವವನ್ನು ತಮ್ಮ ನಿರ್ಮಲವಾದ ಭಕ್ತಿಯ ಮೂಲಕ ತಾಯಿ-ಮಗನು ಪಡೆಯಲು ಅರ್ಹರಾಗಿದ್ದಾರೆಂದು ದೇವರ ಮೂಲಕ ಹೇಳಿಸುತ್ತಾರೆ.

'ಬೊಮ್ಮನ ಹಳ್ಳಿ ಕಿಂದರಿಜೋಗಿ'ಯಲ್ಲಿ ಅವನ ನಾದಕ್ಕೆ ಮನಸೋತ ಮಕ್ಕಳು ಒಂದು ಆದರ್ಶ ರಾಜ್ಯವನ್ನೇ ಕಂಡರು ಅದೇ ರೀತಿ ಇಲ್ಲಿಯೂ ಕೂಡ ಬನದ ಗೋಪಾಲನ ನಾದಕ್ಕೆ ಮನಸೋತ ಗೋಪಾಲನು ಕೂಡ ಇಂತಹ ಲೋಕವನ್ನೇ ಕಾಣುತ್ತಾನೆ.

ಈ ಕಥನದಲ್ಲಿ ಮುಖ್ಯವಾಗಿ ತಾಯಿಯ ಪ್ರೀತಿ ಹಾಗೂ ಗುರುಗಳ ಪ್ರೀತಿಯನ್ನು ತಿಳಿಯುವುದರ ಜೊತೆಗೆ, ಗೋಪಾಲನು ತೋರುವ ತಾಯಿ ಮೇಲಿನ ಪ್ರೀತಿ, ಗುರುಗಳ ಮೇಲಿನ ಭಕ್ತಿ ಅನನ್ಯವಾಗಿರುವುದನ್ನು ಇದರ ಮೂಲಕ ತಿಳಿಯುವುದಾಗಿದೆ.

---

೧. ಡಾ. ದೇ.ಜ.ಗೌ, ಜಿ.ಎಸ್.ಶಿವರುದ್ರಪ್ಪ, ಪ್ರಧಾನ್ ಗುರುದತ್ತ, ಕುವೆಂಪು ಸಂಚಯ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೦೯, ಪು. ೩೮೨.

ಈ ರೀತಿಯಲ್ಲಿ ಕುವೆಂಪುರವರ ಮಕ್ಕಳ ಸಾಹಿತ್ಯದಲ್ಲಿ ಮಾನವೀಯ ಮೌಲ್ಯಗಳನ್ನು ಮಕ್ಕಳಲ್ಲಿ ಬೆಳೆಸಲು ಕಥೆ, ಕವನ, ನಾಟಕಗಳನ್ನು ರಚಿಸಿರುವುದರ ಮೂಲಕ ಅದರ ಮಹತ್ವವನ್ನು ತಿಳಿಸಿದ್ದಾರೆ.

ಇಂತಹ ಮಾನವೀಯ ಮೌಲ್ಯಗಳನ್ನು, ಅದರ ಮಹತ್ವವನ್ನು ತಿಳಿಸಬೇಕಾದರೆ ಲೇಖಕರಿಗು ಆ ಮೌಲ್ಯಗಳ ಅರಿವಿದ್ದರೆ ಮಾತ್ರ ತಿಳಿಸಲು ಸಾಧ್ಯವಾಗುತ್ತದೆ ಎಂದು ಹೇಳಬಹುದು. ಅದಕ್ಕೆ ತಕ್ಕಂತೆ ಕುವೆಂಪು ಅವರ ಬಗ್ಗೆ ಒಂದು ನಿಜವಾದ ಘಟನೆಯನ್ನು ಇಲ್ಲಿ ಉದಾಹರಣೆಯಾಗಿ ಕೊಡಲಾಗಿದೆ.

'ಅಣ್ಣನ ನೆನಪು' ಕೃತಿಯಲ್ಲಿ ತೇಜಸ್ವಿಯವರು ತಮ್ಮ ಅಣ್ಣನ ಮರುಗುವ ವ್ಯಕ್ತಿತ್ವವನ್ನು ಸೊಗಸಾಗಿ ಮೂಡಿಸಿದ್ದಾರೆ. "ಕುವೆಂಪುರವರ ಮನೆಗೆ ಹಾಲು ಹಾಕುತ್ತಿದ್ದ ಹಾಲಿನ ಮಾದಮ್ಮ ಬರಬರುತ್ತಾ ಹಾಲಿನಲ್ಲಿ ನೀರು ಬೆರೆಸುವ ರೂಢಿಮಾಡಿಕೊಳ್ಳುತ್ತಾಳೆ. ಇದರಿಂದ ಬೇಸತ್ತಾ ತೇಜಸ್ವಿ ತಾಯಿ ಹೇಮಾವತಿಯವರು ಮನೆ ಹತ್ತಿರವೆ ಬಂದು ಹಾಲು ಕರೆದು ಹಾಕಲು ಹೇಳುತ್ತಾರೆ. ಆ ಸಂದರ್ಭದ ಸ್ವಾರಸ್ಯವನ್ನು ತೇಜಸ್ವಿ ಹೇಳುವುದು ಹೀಗೆ – ಮಾರನೆ ದಿನ ಬೆಳಗ್ಗೆ ಎದ್ದಾಗ ನಮಗೊಂದು ಆಘಾತಕಾರಿ ದೃಶ್ಯ ಕಾದಿತ್ತು. ಮಾದಮ್ಮ ಹಾಲು ಕರೆಯಲು ಎಮ್ಮೆಯನ್ನೇನೋ ತಂದಿದ್ದಳು. ಆದರೆ ಕರು ಇಲ್ಲದೆ ಎಮ್ಮೆ ಹಾಲು ಕೊಡುವುದಿಲ್ಲವಾದ್ದರಿಂದ ಅವಳು ಸತ್ತ ಕರುವಿನ ಗೊಂಬೆ ಮಾಡಿ ಹೊತ್ತು ತಂದಿದ್ದಳು. ಆ ಗೊಂಬೆಯ ಗುಳಿಬಿದ್ದ ಕಣ್ಣು ಬಾಯಿಗಳಿಂದೆಲ್ಲಾ ಹುಲ್ಲು ಹೊರಚಾಚಿಕೊಂಡು ಅದು ಹೊಸ ಮನೆಗಳೆದರು ಕಟ್ಟುವ ದೃಷ್ಟಿ ಬೊಂಬೆಯಂತೆ ವಿಕಾರವಾಗಿ ಕಾಣುತ್ತಿತ್ತು. ಅಣ್ಣನಿಗೆ ಬೆಳಗ್ಗೆ ಎದ್ದು ಈ ಕರುಣಾಜನಕ ದೃಶ್ಯ ನೋಡುವುದು ಎರಡೇ ದಿನಕ್ಕೆ ಅಸಹನೀಯವಾಯ್ತೆಂದು ತೋರುತ್ತದೆ. ಮೂರನೆಯ ದಿನ ಮಾದಮ್ಮನಿಗೆ "ನೀನು ಹಟ್ಟಿಯಿಂದಲೇ ಹಾಲು ಕರೆದು ತಂದುಕೊಡು. ಇಲ್ಲಿಗೆ ಎಮ್ಮೆ ಹೊಡಕೊಂಡು ಬರುವ ಅಗತ್ಯವಿಲ್ಲ"[೧] ಎಂದು ಹೇಳಿಬಿಟ್ಟರು.

"ನೀರು ಹಾಲು ಕುಡಿದರೂ ಪರ್ವಾಗಿಲ್ಲ. ನನಗೆ ಅದರ ಕರುವಿನ ಕರುಣಾಜನಕ ಸ್ಥಿತಿ ಜ್ಞಾಪಕಕ್ಕೆ ಬರುತ್ತದೆ. ದಿನಾ ಬೆಳಿಗ್ಗೆ ಆ ದೃಶ್ಯವನ್ನು ನೋಡುವುದು ಬೇಡ" ಎಂದರು.

ಹೀಗೆ ಕುವೆಂಪುರವರು ನೋವು-ನಲಿವುಗಳಿಗೆ ಸ್ಪಂದಿಸುತ್ತಿದ್ದರು. ಅವರಲ್ಲೂ ಕೂಡ ಪ್ರೀತಿ, ಪ್ರೇಮ, ಭಕ್ತಿ, ಕರುಣೆ, ಧೈರ್ಯ – ಈ ರೀತಿಯ ಎಲ್ಲಾ ಮಾನವೀಯ ಮೌಲ್ಯಗಳನ್ನು ಒಳಗೊಂಡಿದ್ದರು. ಆದ್ದರಿಂದಲೇ ಕನ್ನಡ ಸಾಹಿತ್ಯಕ್ಕೆ ಮಕ್ಕಳ ಸಾಹಿತ್ಯವನ್ನು ಕೊಡುಗೆಯಾಗಿ ನೀಡಲು ಸಾಧ್ಯವಾಯಿತು.

---

೧. ಪೂರ್ಣಚಂದ್ರ ತೇಜಸ್ವಿ, ಅಣ್ಣನ ನೆನಪು, ಪುಸ್ತಕ ಪ್ರಕಾಶನ, ಸರಸ್ವತಿಪುರಂ, ಮೈಸೂರು, ಪು. ೨೨.

# ಅಧ್ಯಾಯ ನಾಲ್ಕು

# ನಿಸರ್ಗ

ನಿಸರ್ಗದ ಶಿಶುವಾದ ಕುವೆಂಪು ಅವರು ನಿಸರ್ಗದ ಸಂದೇಶವನ್ನು ಆಲಿಸುತ್ತಿದ್ದಾರೆ. ಹುಟ್ಟಿದಾಗಿನಿಂದ ಪ್ರಕೃತಿಯೇ ಅವರನ್ನು ಪೋಷಿಸಿ, ಪಾಲಿಸಿ ಬೆಳೆಸಿದೆ. ಆದ್ದರಿಂದಲೇ ಖ್ಯಾತ ಭೂಗೋಳತಜ್ಞ 'ಫ್ರೆಡ್‌ರಿಕ್ ರ್‍ಯಾಟ್ಜಲ್'ನು 'ಮಾನವ ಪ್ರಕೃತಿಯ ಕೂಸು' ಎಂದು ಹೇಳಿದ್ದಾನೆ. ಅಂತೆಯೇ ಮಾನವ ಮತ್ತು ಪರಿಸರ ಒಂದಕ್ಕೊಂದು ಅವಿನಾಭಾವ ಸಂಬಂಧವನ್ನೊಂದಿದೆ. ಮಾನವ ಪ್ರಕೃತಿಯ ಒಂದು ಅಂಗವಾಗಿದೆ. ಆದರೆ ಪ್ರಕೃತಿಯ ನಿತ್ಯ ವ್ಯಾಪಾರಗಳನ್ನು ಸಾಮಾನ್ಯ ಮನುಷ್ಯ ಭಾವಿಸುವ ನೆಲೆಗಿಂತ ಮನಸ್ಸಿನಾಳದಲ್ಲಿ ಸೂಕ್ಷ್ಮವಾಗಿ, ಕ್ರಿಯಾತ್ಮಕವಾಗಿ, ಸ್ಪಂದನಾತ್ಮಕವಾಗಿ ಕವಿದೃಷ್ಟಿ ನೋಡುತ್ತದೆ.



ಕವಿ ಮನಸ್ಸಿಗೆ ಪ್ರಕೃತಿ ಕೇವಲ ಭೌತಿಕ ವಸ್ತುವಾಗಿ ಗೋಚರಿಸದೆ ದೈವೀದರ್ಶನದ ಸಾನಿಧ್ಯವಾಗಿ ಕಾಣುತ್ತದೆ. ರಸಋಷಿ ಕುವೆಂಪು ಅವರು ಪ್ರಕೃತಿಯ ಪರಮಾರಾಧಕ ಕವಿ. ಮಾನವನ ದೇಹದಲ್ಲಿರುವ ರಕ್ತದಂತೆ ಸಹಜವಾಗಿ ಪ್ರಕೃತಿಯು ಕುವೆಂಪು ಸಾಹಿತ್ಯದಲ್ಲಿ ಹರಿದು ಬಂದಿದೆ ಎಂದು ಹೇಳಬಹುದು. ಪ್ರಕೃತಿಯ ಪ್ರೇಮ. ಅದರ ಆಸ್ವಾದನೆಗಳನ್ನು ಅರ್ಥಪೂರ್ಣವಾಗಿ ಸಾಹಿತ್ಯದಲ್ಲಿ ಅಭಿವ್ಯಕ್ತಿಸಿದ ಕಾರಣದಿಂದಲೇ ಕುವೆಂಪು ಪ್ರಕೃತಿಕವಿ ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ.

ಕುವೆಂಪುರವರ ಕಾವ್ಯವು ಪ್ರಕೃತಿಯ ಸಮ್ಮುಖದಲ್ಲಿ ಪ್ರಕಟಿಸುವ ತನ್ಮಯತೆಗಳು ಅವರ ಅನುಭಾವದ ನೆಲೆಯಿಂದ ಬಂದುದಾಗಿದೆ. ಕುವೆಂಪು ಸಾಹಿತ್ಯದ ಸೃಜನಶೀಲತೆ ಅವರ ಪ್ರತಿಯೊಂದು ಸಾಧನೆಗಳಿಗೆ ಪ್ರಕೃತಿಯೇ ನಿಯಂತ್ರಕ ಶಕ್ತಿಯಾಗಿದೆ ಎಂದರೆ ತಪ್ಪಾಗಲಾರದು.

ಕುವೆಂಪು ಅವರ ಪ್ರಕೃತಿ ಕುರಿತ ಕವನಗಳಿಗೆ ಮಲೆನಾಡಿನ ನಿಸರ್ಗ ಸೌಂದರ್ಯದ ಪ್ರೇರಣೆ ಒಂದೆಡೆಯಾದರೆ ಪ್ರಕೃತಿ ಕವಿಯೆಂದೇ ಖ್ಯಾತನಾಗಿದ್ದ ಆಂಗ್ಲಕವಿ ವರ್ಡ್ಸ್‌ವರ್ತ್‌ನ ಕವನಗಳ ಓದುವಿಕೆಯ ಪ್ರಚೋದನೆ ಮತ್ತೊಂದೆಡೆಯಾಗಿದೆ. ನಿಸರ್ಗದಿಂದ ಬಾಲಚೇತನವೊಂದು ಪಡೆಯಬಹುದಾದ ಸರಳಾನುಭವದಿಂದ ಹಿಡಿದು ಪ್ರಬುದ್ಧ ಚೇತನವೊಂದಕ್ಕೆ ಒದಗಬಹುದಾದ ಅತ್ಯಂತ ಸಂಕೀರ್ಣಾನುಭವಗಳೆಲ್ಲವನ್ನು ಅವರ ಕವನಗಳಲ್ಲಿ ಕಾಣಬಹುದಾಗಿದೆ.

ಕುವೆಂಪು ಸಾಹಿತ್ಯದಲ್ಲಿ ಪ್ರಕೃತಿ ವರ್ಣನೆಯನ್ನು ಅವಲೋಕಿಸ ಹೊರಟರೆ ಅದು ಅವರ ಅಖಂಡ ಸಾಹಿತ್ಯವನ್ನು ಅವಲೋಕಿಸಿದಂತಾಗುತ್ತದೆ. ಇರುವ ಪರಿಮಿತಿಯಲ್ಲಿ ಕುವೆಂಪುರವರ ಮಕ್ಕಳ ಸಾಹಿತ್ಯದಲ್ಲಿ ಪ್ರಕೃತಿಯು ವ್ಯಕ್ತವಾಗಿರುವ ಬಗೆಯನ್ನು ಈ

ಅಧ್ಯಯನದ ಚೌಕಟ್ಟಿನೊಳಗೆ ದರ್ಶಿಸುವುದು ಪ್ರಸ್ತುತ ಈ ಪತ್ರದ ಉದ್ದೇಶವಾಗಿದೆ. ಇರುವಷ್ಟು ವ್ಯಾಪ್ತಿಯಲ್ಲಿ ಕುವೆಂಪುರವರ ಮಕ್ಕಳ ಸಾಹಿತ್ಯದಲ್ಲಿ ಪ್ರಕೃತಿ ಯಾವ ರೀತಿ ಆಕೃತಿ ಪಡೆದಿದೆ ಎಂಬುದರ ಸ್ಥೂಲ ರೂಪದರ್ಶನವನಷ್ಟೇ ಇಲ್ಲಿ ಮಾಡಿದ್ದೇನೆ.

ಮೊದಲಿಗೆ ಕುವೆಂಪುರವರ ಮೊಟ್ಟ ಮೊದಲ ಕೃತಿಯಾದಂತಹ 'ಅಮಲನ ಕಥೆ'ಯನ್ನು ಅವಲೋಕಿಸುವುದಾದರೆ, ಹರಿಯ ಪರಮಭಕ್ತನಾದ ಅಮಲ ಸೌದೆ ಕಡಿದು ಜೀವನ ನಡೆಸುವ ಒಬ್ಬ ಬಡವ. ಈತನೇ ಈ ಕಥೆಯ ನಾಯಕ. ಪ್ರತಿದಿನವು ಬೆಳಗಿನ ಜಾವ ಗಂಜಿಯುಂಡು ದೇವರನ್ನು ಧ್ಯಾನಿಸುತ್ತ ಸೌದೆ ಕಡಿಯಲು ಹೆಗಲ ಮೇಲೆ ಕೊಡಲಿಯೇರಿಸಿಕೊಂಡು ಕಾಡಿಗೆ ಹೋಗುತ್ತಾನೆ. ಕಾಡಿಗೆ ಹೋಗುತ್ತಿದ್ದಂತೆ ಅಮಲನು ಕಾಣುವ ಪ್ರಕೃತಿಯ ಸೌಂದರ್ಯ. ಅಲ್ಲಿನ ವಿಸ್ಮಯಗಳನ್ನು ಅದರ ಚಿತ್ರಗಳನ್ನು ಕುವೆಂಪುರವರು ಮಕ್ಕಳಿಗೆ ಚಿತ್ರಪಟದಂತೆ ಬಿಚ್ಚಿಡುತ್ತಾ ಹೋಗುತ್ತಾರೆ.

"ಎಲ್ಲಿ ನೋಡಿದರಲ್ಲಿ ಕೊಂಬೆಯು
ಮಲ್ಲಿಗೆಯ ಸೊಬಗಿಂದ ಮಿನುಗುತ
ಸಲ್ಲಲಿತ ಪರಿಮಳವ ಬೀರುವ
ಎಲ್ಲರೊಡೆಯನ ತೋರಿತು!

ಲಲಿತ ಗಂಧವನಿತ್ತು ಎಸೆಯುವ
ಹಳದಿ ಸೇವಂತಿಗೆಯು ಸೊಬಗನು
ಅಲರು ಅರಳಿದ ಪೂಗಳಿಂದಲಿ
ಹಲವು ಬಗೆಯಿಂ ಬೀರಿತು

ಮಧುರ ಕಂಪನು ಕೊಡಲು ಸಂಪಗೆ
ಅದರ ರಸವನು ಬಿಡುತ ತುಂಬಿಯು
ಬೆದರಿ ಮರಣಕೆ ಬೇರೆ ಪೂಗಳ
ಚರುತನದಲಿ ಹೀರಿತು"[೧]

ಅಮಲನು ಕಾಡನ್ನು ನೋಡಿ ಅಲ್ಲಿನ ಮಲೆನಾಡಿನ ಪರಿಸರಕ್ಕೆ ಬೆರಗಾಗುತ್ತಾನೆ. ಅಲ್ಲಿರುವ ಮರಗಿಡಗಳು, ಆ ಮರಗಿಡಗಳಲ್ಲಿ ಅರಳಿ ನಿಂತಿರುವ ಬಗೆಬಗೆಯ ಹೂಗಳು. ಹಳದಿ ಸೇವಂತಿಗೆ, ಸಂಪಿಗೆ, ಜಾಜಿಗಳಷ್ಟೇ ಅಲ್ಲದೆ ಇನ್ನೂ ಅನೇಕ ರೀತಿಯ ಹೂಗಳಿಂದ ಹಬ್ಬಿರುವ ಪರಿಮಳದಿಂದ ಪುಳಕಿತನಾಗುತ್ತಾನೆ.

---

೧. ಕುವೆಂಪು, ಅಮಲನ ಕಥೆ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೪, ಪು. ೪.

"ಉದಯವಾಗುವ ರವಿಯ ಚಂದವ
ಮುದದಿ ನೋಡುತ ಮೀರೆ ಸಂತಸ
ಹೃದಯ ಹರುಷದಿ ಹಾರಿ ಕುಣಿಯಿತು;
ವದನ ಸಂತಸ ತೋರಿತು

ಮೂಡಣೆಲ್ಲವು ಹೊನ್ನ ಬಣ್ಣದಿ
ನಾಡನೆಲ್ಲಿಯು ಬೆಳಗಿ ನಲಿಯುತ
ಬಾಡಿ ಬಳಲದ ಅಲರನೆಲ್ಲವ
ನೋಡಿ ಸಂತಸಗೊಂಡಿತು!

ಮಿಸುನಿ ಕಾಂತಿಯ ಮೀರಿ ಥಳಿಸುವ
ಬಿಸಜ ಬಾಂಧವನುದಯವಾಗಲು
ಬಿಸಜ ಸಂಭವ ಸೃಷ್ಟಿ ಸಕಲವು
ಅಸಮ ಘೋಷದಿ ನಲಿಯಿತು!"[೧]

ಇದರಲ್ಲಿ ಸೂರ್ಯೋದಯದಿಂದ ಇಡೀ ಪ್ರಕೃತಿಯೇ ಸುಂದರವಾಗಿ ಕಾಣುತ್ತದೆ. ಸೂರ್ಯನ ಕಿರಣಗಳಿಂದ ನಿಸರ್ಗದ ಸೌಂದರ್ಯವೆಲ್ಲವೂ ಇಮ್ಮಡಿಗೊಂಡಿದೆ. ಇದನ್ನು ನೋಡುವುದೇ ಒಂದು ಸಂತಸ, ಮನಸ್ಸಿಗೆ ಆನಂದವನ್ನುಂಟುಮಾಡುತ್ತದೆ. ಚಿನ್ನದ ಬಣ್ಣವನ್ನು ಹೊಂದಿದಂತೆ ಇರುವ ಆ ಸೂರ್ಯನ ಕಿರಣಗಳು ಪ್ರಕೃತಿಯ ಒಂದು ವರವಾಗಿದೆ.

ಸೂರ್ಯೋದಯ ಎಂದಾಗ ನಮಗೆ ಮೊದಲು ನೆನಪಾಗುವುದು 'ಆನಂದಮಯ ಈ ಜಗಹೃದಯ' ಈ ಕವನದ ಸಾಲುಗಳು

"ಆನಂದಮಯ ಈ ಜಗಹೃದಯ :
ಏತಕೆ ಭಯ? ಮಾಣೊ!
ಸೂರ್ಯೋದಯ ಚಂದ್ರೋದಯ
ದೇವರ ದಯ ಕಾಣೋ!

ಬಿಸಿಲಿದು ಬರಿ ಬಿಸಿಲಲ್ಲವೋ
ಸೂರ್ಯನ ಕೃಪೆ ಕಾಣೋ!
ಸೂರ್ಯನು ಬರಿ ರವಿಯಲ್ಲವೊ:
ಆ ಭ್ರಾಂತಿಯ ಮಾಣೊ!"[೨]

---

೧. ಕುವೆಂಪು, ಅಮಲನ ಕಥೆ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೪, ಪು. ೫.

೨. ಸಿ.ಪಿ.ಕೆ. ಕುವೆಂಪು ಅವರ ಆಯ್ದಕವಿತೆಗಳು(ಸಂ), ಬಾಪ್ಕೋ ಪ್ರಕಾಶನ, ಬೆಂಗಳೂರು, ಪು. ೧.

ಸೂರ್ಯೋದಯ, ಚಂದ್ರೋದಯಗಳೆರಡು ಕೇವಲ ಯಾಂತ್ರಿಕ ಚಲನೆಗಳಲ್ಲ. ಕವಿಗೆ ಅದೊಂದು ಮಾನವಾತೀತವಾದ ವಿಶ್ವಶಕ್ತಿಯ ಕೈವಾಡವಿದೆ ಎನ್ನಬಹುದು. ಸೂರ್ಯನ ಉದಯತೆಯಲ್ಲಿ ಅಮೃತವಿದೆ. ಏಕೆಂದರೆ, ಸಾಮಾನ್ಯ ಮನುಷ್ಯನು ಅದನ್ನು ಬಿಸಿಲೆಂದು ಭಾವಿಸುತ್ತಾನೆ. ಆದರೆ, ಕವಿಯ ದೃಷ್ಟಿಯಲ್ಲಿ ಅದೊಂದು ವರದಾನವಾಗಿದೆ.

ಹೀಗೆ ಸೂರ್ಯೋದಯವನ್ನು ನೋಡುವುದೇ ಒಂದು ಆನಂದ. ಅಂತಹ ಹೊನ್ನಿನ ಬೆಳಕಿನಿಂದ ಆ ಮಲೆನಾಡ ನಿಸರ್ಗದಲ್ಲಿ ಕಾಣುವ ಬಣ್ಣಬಣ್ಣದ ಹೂಗಳು, ಪಶು–ಪಕ್ಷಿಗಳು, ಕ್ರಿಮಿಕೀಟಗಳು ಕೂಡ ಬಣ್ಣ–ಬಣ್ಣಗಳಿಂದ ಕಂಗೊಳಿಸುತ್ತಿದ್ದವು.

"ಬಣ್ಣ ಬಣ್ಣದ ಹಣ್ಣು ಹೂಗಳು
ಬಣ್ಣ ಬಣ್ಣದ ಪಕ್ಕಿ ಪಶುಗಳು
ಬಣ್ಣ ಬಣ್ಣದ ಕೀಟ ಕ್ರಿಮಿಗಳು
ಬಣ್ಣ ಬಣ್ಣದಿ ಮೆರೆದುವು!"[೧]

– ಹೀಗೆ ಅಮಲನು ಸೂರ್ಯೋದಯನವನ್ನು ಕಂಡು ನಲಿಯುತ್ತಾನೆ. ಬಗೆಬಗೆಯ ಬಣ್ಣಗಳಿಂದ ಶೋಭಿಸುತ್ತಿರುವ ಹಣ್ಣು, ಹೂ, ಪಶು–ಪಕ್ಷಿಗಳನ್ನು ನೋಡಿ ಆನಂದಿಸುತ್ತಾನೆ.

ಅನಾದಿಕಾಲದಿಂದಲೂ 'ಹೂ'ಗಳಿಗೆ ಅದರದೇ ಆದ ಸ್ಥಾನವನ್ನು ಕೊಟ್ಟು ಗೌರವಿಸಲಾಗಿದೆ. ಏಕೆಂದರೆ ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ದೇವರನ್ನು ಪೂಜಿಸಲು 'ಹೂ'ವನ್ನು ಬಳಸಲಾಗುತ್ತದೆ. ಹಾಗೂ ನಮ್ಮ ಸಂಸ್ಕೃತಿಯ ಪ್ರಕಾರ ಮದುವೆಯಾಗಿರುವ ಹೆಣ್ಣುಮಗಳನ್ನು 'ಮುತ್ತೈದೆ' ಎಂದು ಸಂಬೋಧಿಸಲಾಗುತ್ತದೆ. ಆ ಮುತ್ತೈದೆಗೆ ಬೇಕಾದ ಆಭರಣಗಳಲ್ಲಿ 'ಹೂ' ಕೂಡ ಒಂದಾಗಿದೆ. ಹೀಗೆ ಪರಿಶುದ್ಧತೆಯಿಂದ, ಪರಿಮಳದಿಂದ ಕೂಡಿರುವ ಅನೇಕ ಹೂಗಳು ಇವೆ. ಆದರೆ, ಅಂತಹ ಅನೇಕ ಹೂಗಳನ್ನು ಕಾಣದ ನಾವುಗಳು ಕುವೆಂಪುರವರ ಕವನಗಳಲ್ಲಿ ಅದನ್ನು ಕಾಣಬಹುದಾಗಿದೆ.

ನಿಸರ್ಗ ಕವಿಯಾದ ಕುವೆಂಪು ಅವರು ಪ್ರಪ್ರಥಮವಾಗಿ ರಚಿಸಿದ ಕವಿತೆಯೇ ಪೂವು:

"ಮುಂಜಾನೆ ಮಂಜಿನೊಳು
ಪಸುರಲ್ಲಿ ನಡೆವಾಗ
ಅಂಜಿಸುವ ಸಂಜೆಯೊಳು
ಉಸಿರನ್ನು ಎಳೆವಾಗ
ಎಲೆ ಪೂವೆ ಆಲಿಸುವೆ .

---

೧. ಕುವೆಂಪು, ಅಮಲನ ಕಥೆ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೪, ಪು. ೬.

ನಾ ನಿನ್ನ ಗೀತೆಯನು
ಎಲೆ ಪೂವೆ ಸೋಲಿಸುವೆ
ನಾ ನಿನ್ನ ಪ್ರೀತಿಯನು"[೧]

– ಹೂವು ಸೌಂದರ್ಯದ ಪ್ರತೀಕ ಎಂದು ಹೇಳಬಹುದು. ಮಲೆನಾಡಿನಲ್ಲಿ ಹುಟ್ಟಿದ ಕುವೆಂಪು ಹಲವಾರು ಹೂವುಗಳನ್ನು ನೋಡಿ ಅದರ ಸೌಂದರ್ಯವನ್ನು ಅನುಭವಿಸಿರುವುದನ್ನು ಅವರ ಕವನಗಳಲ್ಲಿ ಕಾಣಬಹುದಾಗಿದೆ. ಆದರೆ, ಅವರು ಕಂಡಂತಹ ಅನೇಕ ಪುಷ್ಪಗಳಲ್ಲಿ ಕೆಲವನ್ನು ಮಾತ್ರ ಕವನಗಳ ಮೂಲಕ ಪರಿಚಯಿಸಿದ್ದಾರೆ.

"ಪುಷ್ಪಮಿಸುನಿಗಳಿಂದ ಶೋಭಿತ
ಪುಷ್ಪಗಂಧದ ಪುಷ್ಪವತಿಯರು
ಪುಷ್ಪತರುಣರ ನೋಳ್ಪ ತೆರದಿಂ
ಪುಷ್ಪಗಳು ತಾವ್ ಮೆರೆದುವು!

ಕೆಂಪು ತುಂಬಿಯು ನಂಜಬಟ್ಟಲು,
ಗುಂಪು ಗುಂಪಿನ ಚಂಡು ಹೂಗಳು
ಕಂಪು ಗೊರಟೆಯು ಚಂಪ ಪುಷ್ಪವು
ಸೊಂಪಿನಿಂದಲಿ ಮೆರೆದುವು"[೨]

ಹೀಗೆ ಪ್ರಕೃತಿ ಸೌಂದರ್ಯಕ್ಕೆ ಆಕರ್ಷಿತನಾದ ಅಮಲನು ಕಾಡಿನಲ್ಲಿರುವ ಹಸಿರು ಹುಲ್ಲಿನ ರಾಶಿ, ಹರಿದು ಬರುವ ತೊರೆಗಳು, ಗಿರಿ, ಪರ್ವತ, ಶುಕ–ಪಿಕ, ಮೃಗಪಕ್ಷಿಗಳ ಹರುಷವನ್ನು ಕಂಡು ತಾನೂ ಹರ್ಷಿತನಾಗಿ ಈ ಕೆಳಗಿನ ಮಾತುಗಳನ್ನು ಆಡುತ್ತಾನೆ.

"ಆಡವಿಯೆಲ್ಲಿಯು ತುಂಬಿ ರವದಲಿ
ಬಿಡದೆ ಅಮಲನ ಅಮಲ ಮನದಲಿ
ಬಡವರಾಗಿಹ ನರರಿಗೆಲ್ಲವು
ಅಡವಿ ಅರಮನೆ ಎಂದನು"[೩]

– ನಿಸರ್ಗದ ರಮಣೀಯತೆಯನ್ನು ಕಂಡು ಆನಂದಗೊಂಡ ಅಮಲ ತನ್ನ ಮನಸ್ಸಿನಲ್ಲಿ ಬಡವರಾಗಿರುವ ಎಲ್ಲರಿಗೂ ಈ ಅಡವಿಯೆ ಅರಮನೆ ಎಂದು ಹೇಳಿಕೊಳ್ಳುತ್ತಾನೆ.

---

೧. ದೇಜಗೌ, ಮಹಾಕವಿಕುವೆಂಪು ದರ್ಶನ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ೨೦೧೦, ಮೈಸೂರು, ಪು. ೭೦

೨. ಕುವೆಂಪು, ಅಮಲನ ಕಥೆ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೪, ಪು. ೬

೩. ಅದೇ., ಪು. ೮

ಇತ್ತ ಕಡೆ ಇನ್ನೊಂದು ಸನ್ನಿವೇಶವನ್ನು ಗಮನಿಸುವುದಾದರೆ, ತನ್ನ ತಂದೆ ಕತ್ತಲಾದರೂ ಮನೆಗೆ ಬಾರದಿದ್ದಾಗ ಮಗ ಪಂಜನ್ನು ಹಿಡಿದು ಅದೇ ಕಾಡಿನ ಮಧ್ಯದಲ್ಲಿ ಹುಡುಕಲು ಹೊರಡುತ್ತಾನೆ. ಹೊರಡುವ ಸಂದರ್ಭದಲ್ಲಿ:

"ಆಗ ಗಾಳಿಯು ಬೀಸಿ ಬರುತಲಿ
ಆಗಸೆಲ್ಲವು ಮೋಡ ಕವಿಯುತ
ತಾಗಿ ಸಿಡಿಲಿನ ಶಬ್ದ ಮಾಡಲು
ಬೇಗದಿಂ ಮಳೆ ಸುರಿಯಿತು!"[೧]

– ಇಲ್ಲೂ ಕೂಡ ಕವಿ ಪ್ರಕೃತಿಯಲ್ಲಿ ಒಂದಾದ ಗಾಳಿ, ಮೋಡ, ಗುಡುಗು, ಮಿಂಚು, ಸಿಡಿಲು, ಮಳೆಯನ್ನು ಮಕ್ಕಳಿಗೆ ಪರಿಚಯಿಸುತ್ತಿದ್ದಾರೆ. ಇರುವಂತಹ ಪ್ರತಿಯೊಂದು ಸನ್ನಿವೇಶದಲ್ಲೂ ಕೂಡ ಪ್ರಕೃತಿ ಚಿತ್ರಣವನ್ನು ಕವಿ ತುಂಬಾ ಸೊಗಸಾಗಿ ಚಿತ್ರಿಸಿ ಮಕ್ಕಳ ಮನಸ್ಸನ್ನು ಆಕರ್ಷಿಸಿದ್ದಾರೆ.

ಇದಷ್ಟೇ ಅಲ್ಲದೆ ಅಮಲನು ತನ್ನ ಪ್ರಾಣವನ್ನು ಲೆಕ್ಕಿಸದೆ ಸಹಾಯ ಬೇಡಿ ಬಂದ ಹರಿಣವನ್ನು ರಕ್ಷಿಸುವುದರ ಮೂಲಕ ಕವಿಯು ಮಕ್ಕಳಲ್ಲಿ ಪ್ರಾಣಿ–ಪಕ್ಷಿಗಳ ಬಗೆಗೆ ಪ್ರೀತಿ ಬೆಳೆಸುವುದರ ಜೊತೆಗೆ ಪ್ರಾಣಿ ಮೇಲೆ ಕರುಣೆ ತೋರಿಸಬೇಕೆಂಬ ಅಂಶವನ್ನು ಬಿಂಬಿಸಿದ್ದಾರೆ.

'ನರಿಗಳಿಗೇಕೆ ಕೋಡಿಲ್ಲ' ಎಂಬ ಕಥೆಯ ಮೂಲಕ 'ಗುಬ್ಬಕ್ಕ–ಗುಬ್ಬಣ್ಣ' ಎಂಬ ಪಕ್ಷಿಗಳನ್ನು 'ನರಿಯಣ್ಣ ಹುಲಿಯಣ್ಣ, ಕರಡ್ಯಣ್ಣ' ಎಂಬ ಕಾಡು ಪ್ರಾಣಿಗಳ ಜೊತೆಯಲ್ಲಿ ಕೊನೆಯ ಸನ್ನಿವೇಶದಲ್ಲಿ ಬರುವ ಮತ್ತೊಂದು ಪಕ್ಷಿ 'ಗೂಬಮ್ಮ' ಎಂಬುದನ್ನು ಮಕ್ಕಳಿಗೆ ಕವಿ ಪರಿಚಯಿಸಿದ್ದಾರೆ.

ಮಕ್ಕಳ ಮುಗ್ಧ ಮನಸ್ಸನ್ನು ಅರಿತಿರುವ ಕುವೆಂಪು ಇಂತಹ ಪ್ರಾಣಿಪಕ್ಷಿಗಳನ್ನು ಬಳಸಿಕೊಂಡೇ ಮಕ್ಕಳ ಮನಸ್ಸನ್ನು ಗೆದ್ದಿದ್ದಾರೆ. ಮೊದಲಿನಿಂದಲೂ ಕಾಗಕ್ಕ ಗೂಬಕ್ಕನ ಕಥೆಗಳಿಗೆ ಮನಸೋಲುವ ಮಕ್ಕಳು ಈ ಕಥೆಯ ಮೂಲಕ ಒಂದು ನೀತಿ ಪಾಠವನ್ನು ಕಲಿಯುತ್ತಾರೆ. ಇಂತಹ ಪ್ರಾಣಿಪಕ್ಷಿಗಳನ್ನು ಒಳಗೊಂಡಂತಹ ಕಥೆಗಳು ಮಕ್ಕಳಿಗೆ ಅತೀ ಹೆಚ್ಚು ಆಕರ್ಷಿತವಾಗುವುದರ ಜೊತೆಗೆ ಹೆಚ್ಚಿನ ಸಮಯ ಅವರ ಮನಸ್ಸಿನಲ್ಲಿ ಉಳಿಯಲು ಸಹಕಾರಿಯಾಗಿದೆ.

---

೧. ಕುವೆಂಪು, ಅಮಲನ ಕಥೆ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೪, ಪು. ೨೪

ಕಥೆಯ ಮೊದಲ ಸಾಲಿನಲ್ಲಿ ಇರುವಂತೆ ಕವಿ ಕುವೆಂಪುರವರ ಹುಟ್ಟೂರಾದ ತೀರ್ಥಹಳ್ಳಿಗೆ ನಾಲ್ಕೈದು ಮೈಲಿಗಳ ದೂರದಲ್ಲಿ 'ನವಿಲುಕಲ್ಲು' ಎಂಬ ಬೆಟ್ಟವಿದೆ. ಈ ಬೆಟ್ಟವು ಹಚ್ಚ ಹಸುರಿನಿಂದ ಕೂಡಿದ ಕಾಡಿನ ಮಧ್ಯದಲ್ಲಿದ್ದು ಸುತ್ತಲೂ ಈ ಬೆಟ್ಟವನ್ನು ಮಲೆನಾಡಿನ ಕಾಡುಗಳು ಆವರಿಸಿರುವುದರಿಂದ ಅದರ ನೋಟವು ಬಲು ಸೊಗಸಾಗಿದೆ ಎಂದು ಕವಿ ತಿಳಿಸಿದ್ದಾರೆ. ಅದರ ಜೊತೆಯಲ್ಲಿ ಮಂಜಿನಿಂದ ಮುಸುಕಾಗಿರುವ ಮೋಡಗಳು ಒಂದರ ಮೇಲೊಂದರಂತೆ ಗುಡ್ಡೆ ಹಾಕಿಕೊಂಡಿದ್ದು ಸುತ್ತಲೂ ಕಣಿವೆಗಳಲ್ಲಿ ಗದ್ದೆಗಳೂ, ಅಡಕೆ ತೋಟಗಳು ಕಣ್ಣಿಗೆ ಮುತ್ತು ಕೊಡುವಂತೆ ಹಬ್ಬಿದೆ ಎಂದು ಕವಿ ಮಲೆನಾಡಿನ ಪ್ರಕೃತಿ ಚಿತ್ರಣವನ್ನು ಮಕ್ಕಳಿಗೆ ಬಿಚ್ಚಿಡುತ್ತಿದ್ದಾರೆ.

ಇಂತಹ ಸುಂದರ ಪರಿಸರದಲ್ಲಿದ್ದ ನವಿಲುಕಲ್ಲು ಎಂಬ ಬೆಟ್ಟದಲ್ಲಿ ಗುಬ್ಬಕ್ಕ-ಗುಬ್ಬಣ್ಣ ಎಂಬ ದಂಪತಿಗಳ ಸಂಸಾರವಿತ್ತು. ಈ ಗುಬ್ಬಚ್ಚಿಯ ಮನೆಯನ್ನು ಕವಿ ತನ್ನ ಕಲ್ಪನೆಯ ಮೂಲಕ ಎಷ್ಟು ಸೊಗಸಾಗಿ ಚಿತ್ರಿಸಿದ್ದಾರೆಂದರೆ ಎಂತಹ ಮಕ್ಕಳೂ ಕೂಡ ಇದರ ಆಕರ್ಷಣೆಗೆ ಒಳಗಾಗದೆ ಇರರು.

ಕವಿಯ ಪ್ರಕಾರ ಈ ಗುಬ್ಬಚ್ಚಿಯ ಮನೆಯು ಸವಿಯಾದ ಮನೆಯಾಗಿದ್ದು ಒಂದು ಹೆಮ್ಮರದ ನೆತ್ತಿಯ ಭಾಗದ ಕೊಂಬೆಯ ತುದಿಯಲ್ಲಿತ್ತು. ಆ ಕೊಂಬೆಯು ಗಾಳಿ ಬಂದಂತಹ ಸಂದರ್ಭದಲ್ಲಿ ತೊಟ್ಟಿಲಂತೆ ತೂಗಿದಾಗ ಆ ಗಂಡು-ಹೆಣ್ಣು ಹಕ್ಕಿಗಳ ಸಂತೋಷಕ್ಕೆ ಪಾರವೆ ಇಲ್ಲದಂತೆ ಹಾಡಿ ನಲಿಯುತ್ತಿದ್ದವು. ಇವರ ಮನೆಯು ಬೆಲ್ಲದ ಗೋಡೆಯಿಂದ, ಸಕ್ಕರೆಯ ಬಾಗಿಲಿನಿಂದ, ಕಬ್ಬಿನ ಮುಚ್ಚಿಗೆಯಿಂದ ಇರುವುದಲ್ಲದೆ ಮನೆಯ ಮುಂಭಾಗದ ಅಂಗಳದಲ್ಲಿ ಒಂದು ಪುಟ್ಟ ಸರೋವರ ಕೂಡ ಇತ್ತು. ಆದರೆ, ಸರೋವರದಲ್ಲಿ ಸಹಜವಾಗಿ ನೀರಿರುವ ಬದಲು ಜೇನುತುಪ್ಪವಿತ್ತು.

ಮೊದಲೇ ಕವಿ ತಿಳಿಸಿದಂತೆ ಇದು ನಿಜವಾಗಲು ಸವಿಯಾದ ಮನೆಯೇ ಹೌದು. ಇಲ್ಲಿ ಕವಿಯ ಕಲ್ಪನಾಶಕ್ತಿಗೆ ತಲೆಬಾಗಲೇ ಬೇಕು.

ಇದೇ ರೀತಿ ಇರುವಾಗ ಒಂದು ದಿನ ರಾತ್ರಿ ದೊಡ್ಡ ಮಳೆ ಬರುತ್ತದೆ. ಅದು ಅಂತಿಂತಹ ಮಳೆಯಲ್ಲ ಮಳೆ ಎಂದರೆ ಮಲೆನಾಡಿನ ಮಳೆ! ಆನೆಮಳೆ! ಎಂದು ಕವಿ ಸ್ಪಷ್ಟವಾಗಿ ಹೇಳುತ್ತಿದ್ದಾರೆ. ಇದಷ್ಟೇ ಅಲ್ಲದೆ ಗುಡುಗು, ಮಿಂಚು, ಸಿಡಿಲು, ಬಿರುಗಾಳಿ, ಆಲಿಕಲ್ಲು ಕೂಡ ಎಂದು ತಿಳಿಸಿದ್ದಾರೆ.

ಈ ಸನ್ನಿವೇಶದ ಮೂಲಕ ಮಳೆಯನ್ನು ಮಕ್ಕಳಿಗೆ ಪರಿಚಯಿಸುವುದರ ಜೊತೆಗೆ ಸಾಮಾನ್ಯ ಮಳೆಗೂ ಮಲೆನಾಡಿನ ಮಳೆಗೂ ಇರುವಂತಹ ವ್ಯತ್ಯಾಸವನ್ನು ತಿಳಿಸಿ, ಮಳೆಯು

ಬರುವ ಸಂದರ್ಭದಲ್ಲಿ ಗುಡುಗು, ಮಿಂಚು, ಬಿರುಗಾಳಿಗಳೆಲ್ಲ ಯಾವ ರೀತಿ ಆರ್ಭಟಿಸುತ್ತದೆ ಎಂಬುದನ್ನು ಈ ಮೂಲಕ ತಿಳಿಸಿದ್ದಾರೆ.

ಇದೇ ಸಮಯದಲ್ಲಿ ಅಂತಹ ದೊಡ್ಡ ಮಳೆಗೆ ಸಿಕ್ಕಿಬಿದ್ದ ಮೂವರು ಪ್ರಮಾಣಿಕರಾದ 'ಹುಲಿಯಣ್ಣ, ನರಿಯಣ್ಣ, ಕರಡ್ಯಣ್ಣ'ನ ಪರಿಚಯವಿಲ್ಲದೆ ಇದ್ದರೂ ಕೂಡ ಆಶ್ರಯ ಕೇಳಿ ಬಂದವರಿಗೆ ಆಶ್ರಯ ನೀಡಿ ಆದರದಿಂದ ಸತ್ಕರಿಸುವ ಗುಬ್ಬಕ್ಕನ ಔದಾರ್ಯತೆಯನ್ನು ಮೆಚ್ಚಲೇಬೇಕು.

ಇಲ್ಲಿ ಕವಿಯು ಮನುಷ್ಯ-ಮನುಷ್ಯನ ಜೊತೆ ನಡೆಯುವ ಮಾತಿನಂತೆಯೇ ಸಾಧು ಪಕ್ಷಿಗಳಾದ ಗುಬ್ಬಚ್ಚಿಯ ಜೊತೆ ಕಾಡು ಪ್ರಾಣಿಗಳು ನಡೆಸುವ ಮಾತುಕತೆಗಳನ್ನು ಅಮೋಘವಾಗಿ ಕುವೆಂಪು ಚಿತ್ರಿಸಿದ್ದಾರೆ. ಇಂತಹ ದೊಡ್ಡ ಕಲ್ಪನೆಯನ್ನು ಸಾಮಾನ್ಯ ಮನುಷ್ಯ ಮಾಡಲಾರನು. ಈ ಕಥೆಯನ್ನು ಕೇಳುವ, ಓದುವ ಪ್ರತಿಯೊಂದು ಮಗುವಿಗೂ ಇದೆಲ್ಲಾ ನಿಜವೇ ಇರಬೇಕೆಂದು ನಂಬುತ್ತದೆ. ಇಂತಹ ದಿವ್ಯಶಕ್ತಿ ಇರುವುದು ಕವಿಗೆ ಮಾತ್ರ ಅದರಲ್ಲೂ ಕುವೆಂಪುರವರ ಪ್ರತಿಭೆಗೆ ಸರಿಸಮಾನವಾದದ್ದು ಮತ್ತೊಂದಿಲ್ಲವೆಂದೇ ಹೇಳಬಹುದು.

ಆಶ್ರಯ ನೀಡಿ ಸತ್ಕರಿಸಿದ ಗುಬ್ಬಕ್ಕನಿಗೆ ಅಪಕಾರವೆಸಗಲು ನರಿಯಣ್ಣ ಗುಬ್ಬಕ್ಕನ ಮಕ್ಕಳನ್ನು ತಿಂದುಬಿಡುತ್ತಾನೆ. ಆದರೆ, ಆ ಸಂದರ್ಭದಲ್ಲೂ ಕೂಡ ಗುಬ್ಬಕ್ಕ ನರಿಯಣ್ಣನ ಮೇಲೆ ಕರುಣೆ ತೋರಿ ಒಂದು ಉಪಾಯದ ಮೂಲಕ ತನ್ನ ಮಕ್ಕಳನ್ನು ಮತ್ತೆ ಪಡೆದು ತನ್ನ ಸವಿಯಾದ ಮನೆಗೆ ಸಂತೋಷದಿಂದ ಹೋಗುತ್ತಾಳೆ.

ಇಲ್ಲಿ ಕುವೆಂಪು ತುಂಬಾ ಜಾಣ್ಮೆಯಿಂದ ಕಥೆಯನ್ನು ಮಕ್ಕಳಿಗೆಂದೇ ರಚಿಸಿದ್ದಾರೆ. ನಮ್ಮ ಸುತ್ತ-ಮುತ್ತಲು ನಡೆಯುವ ಸನ್ನಿವೇಶಗಳಂತೆಯೇ ಪ್ರಾಣಿ-ಪಕ್ಷಿಗಳನ್ನು ಬಳಸಿಕೊಂಡು ಮಕ್ಕಳಿಗೆ ಆಸಕ್ತಿ ಹುಟ್ಟಿಸುವಂತೆ ಚಿತ್ರಿಸಿದ್ದಾರೆ. ಏಕೆಂದರೆ, ಮಕ್ಕಳಿಗೆ ಪ್ರಾಣಿ-ಪಕ್ಷಿಗಳೆಂದರೆ ಎಲ್ಲಿಲ್ಲದ ಪ್ರೀತಿ. ಇಂತಹ ಕಥೆಗಳ ಮೂಲಕ ಮನುಷ್ಯರನ್ನು ಪ್ರೀತಿಸುವುದರ ಜೊತೆಯಲ್ಲಿ ಈ ರೀತಿಯ ಎಲ್ಲಾ ಪ್ರಾಣಿ-ಪಕ್ಷಿಗಳನ್ನು ಪ್ರೀತಿಸಬೇಕೆಂಬುದನ್ನು ತಿಳಿಸುತ್ತಿದ್ದಾರೆ. ಈ ರೀತಿ ಬರುವ ಕಥೆ, ಕವನಗಳಿಗೆ ಮಕ್ಕಳು ಬಹುಬೇಗ ಆಕರ್ಷಿತರಾಗಿ ಒಳ್ಳೆಯ ಅಂಶಗಳನ್ನು ಅಳವಡಿಸಿಕೊಳ್ಳುತ್ತಾರೆ.

'ಹಾಳೂರು' ಎಂಬ ಕವಿತೆಯ ಮೂಲಕ ಕುವೆಂಪುರವರು ಹಾಳೂರು ಎಂಬ ಹಳ್ಳಿಯನ್ನು ಪರಿಚಯಿಸುವುದರ ಜೊತೆಗೆ ಆ ಹಳ್ಳಿಯ ಪರಿಸರ. ಅಲ್ಲಿರುವ ಜನರ ಪರಿಸ್ಥಿತಿಯನ್ನು ತಿಳಿಸುತ್ತಾರೆ. ಒಂದು ಹಳ್ಳಿ ಉನ್ನತಿ ಸ್ಥಾನದಲ್ಲಿದ್ದು ನಗರ ಪ್ರದೇಶಗಳ ಪ್ರಭಾವದಿಂದ ಯಾವ ರೀತಿ ತಮ್ಮ ಸಂಸ್ಕೃತಿಯನ್ನೇ ಕಳೆದುಕೊಂಡು ಅವನತಿಯತ್ತ ಸಾಗುತ್ತಿರುವ ದೃಶ್ಯವನ್ನು ಈ ಕವನದಲ್ಲಿ ತಿಳಿಸಲು ಪ್ರಯತ್ನಿಸಿದ್ದಾರೆ.

ಕವಿಯು ಇಲ್ಲಿ ತಮ್ಮ ಪಟ್ಟಣದ ಗೆಳೆಯನನ್ನು ಹಳ್ಳಿಗೆ ಕರೆದುಕೊಂಡು ಹೋಗಿ ತಾವು ಚಿಕ್ಕಂದಿನಲ್ಲಿ ಇದ್ದಂತಹ ಬಾಲ್ಯದ ಸವಿನೆನಪನ್ನು ಮೆಲುಕುಹಾಕುವುದರ ಜೊತೆಯಲ್ಲಿಯೇ ಈಗಿರುವ ಆ ಹಳ್ಳಿಯ ಪರಿಸ್ಥಿತಿಯನ್ನು ಕಂಡು ಮರಗುತ್ತಾರೆ.

"ಬಾ ಪುರದ ಗೆಳೆಯನೇ, ಹಾಳೂರ ನೋಡು:
ಹಾಳೂರು ಇದು ನಮ್ಮ ರೈತರಿಹ ಬೀಡು;
ಈಗ ಬೀಸುವ ತಂಬೆಲರೆ ಬೀಸಿತಂದು
ಈಗ ತೊಳಗುವ ರವಿಯೆ ರಂಜಿಸಿದನಂದು;
ಈಗಿನಾ ಗಗನವೇ ಮೇಲಿದ್ದಿತಂದು;
ಆದರೂ ಅಂದಿನಾ ಬೆಳಕಿಲ್ಲವಿಂದು!
ಎಲ್ಲಿ ಹೋಯಿತು ಅಂದಿನಾನಂದವಿಂದು?
ಹಳ್ಳಿಯದು ಹಾಳಾಯ್ತೆ ಮುಂದೆ ಎಂದೆಂದೂ?"[೧]

ತಮ್ಮ ಬಾಲ್ಯದಲ್ಲಿ ಆಟವಾಡಿ ನಲಿದಾಡಿದ ಜಾಗಗಳನ್ನು ಗೆಳೆಯನಿಗೆ ಪರಿಚಯಿಸುತ್ತಾ ಅಂದು ಬೀಸುತ್ತಿದ್ದ ಗಾಳಿ, ಉದಯಿಸುತ್ತಿದ್ದ ಸೂರ್ಯ, ಸೊಗಸಾಗಿ ಕಾಣುತ್ತಿದ್ದ ಗಗನ, ಮಳೆ, ಬೆಳಕುಗಳು ಇವೆಲ್ಲ ಇಂದಿಗೂ ಇದ್ದರೂ ಕೂಡ ಅಂದು ನಾನು ಇವುಗಳನ್ನು ನೋಡಿ ಅನುಭವಿಸಿದಂತಹ ಸಂತೋಷ, ಆನಂದವೆಲ್ಲ ಇಂದು ಕಾಣಲು ಸಾಧ್ಯವಾಗದೆ ಮರೆಮಾಚಿಕೊಂಡಿದೆ. ಅದನ್ನು ಹುಡುಕಲು ಪ್ರಯತ್ನಿಸಿದರು ಕೂಡ ಸಿಗದೇ ಇರುವಂತಹ ಜಾಗವನ್ನು ತಲುಪಿದೆ ಎಂದು ಕವಿಯು ಹಳ್ಳಿಯನ್ನು ನೋಡಿ ದುಃಖವನ್ನು ವ್ಯಕ್ತಪಡಿಸುತ್ತಿದ್ದಾರೆ.

ಇದೇ ರೀತಿ ಕವಿಯು ತನ್ನ ಗೆಳೆಯನ ಜೊತೆ ಹಳ್ಳಿಯನ್ನು ಪರಿಚಯಿಸುತ್ತ ಮುಂದೆ – ಮುಂದೆ ಸಾಗುತ್ತಾರೆ. ಹಳ್ಳಿಯನ್ನು ಕಂಡು ದುಃಖಿಸುತ್ತಾರೆ. ಬೇಸರವನ್ನು ವ್ಯಕ್ತಪಡಿಸುತ್ತ ಹಳ್ಳಿಗಳು ಹಾಳಾಗುತ್ತಿರುವ ಪರಿಸ್ಥಿತಿಯನ್ನು ನೋಡಿ ಕವಿಯು ನೇರವಾಗಿ ಪ್ರಕೃತಿಮಾತೆಯಲ್ಲೇ ಮೊರೆಯಿಡುತ್ತಾರೆ.

"ಕೆಂಬಿಸಲು ನಲಿದಾಡೆ ಬೆಟ್ಟಗಳ ಮೇಲೆ
ಮೆಲುಮೆಲನೆ ನಿಶೆ ಜಾರಿ, ತಾರೆ ಕೆಲಸಾರೆ,
ವಿಹಗ ಸಂಕುಲವೆದ್ದು ಇಂಚರವ ಬೀರೆ,
ಭೂದೇವಿ ತನ್ನ ಕರಿ ಹೊದಿಕೆಯನು ತೂರೆ,

---

೧. ಕುವೆಂಪು, ಹಾಳೂರು, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೬, ಪು. ೩

ಮೈದೋರಲಾಕೆಯಾ ಪೊಸ ಹಸರು ಸೀರೆ;
ತಂಬೆಲರು ಬೀಸೆ ಸಮುಗಳ ಸೂರೆಗೊಂಡು
ಝುಂಕರಿಸಿ ಭೃಂಗಾಳಿ ಹಾರೆ ಬಂಡುಂಡು
ಎಲ್ಲಿಯುಂ ನವಜೀವನದ ಕಳೆಯು ತೋರೆ
ಶಾಂತಿಯಾನಂದಗಳ ಸೌಂದರ್ಯ ತಾರೆ"[೧]

ನಗರ ಪಟ್ಟಣಗಳ ನವನಾಗರಿಕತೆಯಿಂದ ಹಳ್ಳಿಗಳ ಪರಿಸ್ಥಿತಿ ಹದಗೆಟ್ಟಿರುವುದನ್ನು ಕಂಡಂತಹ ಕವಿಯು ಅಂದು ಇದ್ದಂತಹ ಪರಿಸರವನ್ನು ಮತ್ತೊಮ್ಮೆ ಹುಟ್ಟುವಂತೆ ಸದಾಕಾಲ ನಳನಳಿಸುವ ಗಗನವನ್ನು, ಬೆಟ್ಟಗಳ ಮೇಲೆ ನಲಿದಾಡುವ ಕೆಂಬಿಸಲನ್ನು, ತಮ್ಮ ಇಂಚರದ ಮೂಲಕ ಎಲ್ಲಾ ಕಡೆ ಸಾರುವ ಪಕ್ಷಿ ಸಂಕುಲವನ್ನು, ಹಚ್ಚ ಹಸುರಿನ ಸೀರೆಯನ್ನು ಉಟ್ಟು ಕಂಗೊಳಿಸುವ ಭೂತಾಯಿಯನ್ನು ತಾನು ಹೊದಿಸಿಕೊಂಡಿರುವ ಕರಿಹೊದಿಕೆಯನ್ನು ತೆಗೆದು ಮೊದಲಿನಂತೆಯೇ ಎಲ್ಲಾ ಕಡೆ ಹೊಸ ಚೈತನ್ಯವನ್ನು ತುಂಬಿ ಶಾಂತಿ, ಆನಂದಗಳ ಮೂಲಕ ಜೀವಕಳೆ ತುಂಬಬೇಕೆಂದು ಕವಿ ಕೇಳಿಕೊಳ್ಳುತ್ತಿದ್ದಾರೆ.

ಈ 'ಹಾಳೂರು' ಕವನಕ್ಕೆ ಪೂರಕವಾಗುವಂತೆ ಕುವೆಂಪುರವರ ಮತ್ತೊಂದು ಕವನವಾದ 'ಹೋಗುವೆನು ನಾ' ಎಂಬುದನ್ನು ಇಲ್ಲಿ ಪರಿಚಯಿಸುವುದು ಸಮಂಜಸವೆಂಬುದು ನನ್ನ ಭಾವನೆ.

"ಹೋಗುವೆನು ನಾ ಹೋಗುವೆನು ನಾ ನನ್ನ ಒಲುಮೆಯ ಗೂಡಿಗೆ;
ಮಲೆಯ ನಾಡಿಗೆ, ಮಳೆಯ ಬೀಡಿಗೆ, ಸಿರಿಯ ಚೆಲುವಿನ ರೂಢಿಗೆ
ಬೇಸರಾಗಿದೆ ಬಯಲು, ಹೋಗುವೆ ಮಲೆಯ ಕಣಿವೆಯ ಕಾಡಿಗೆ;
ಹಸುರು ಸೊಂಪಿನ ಬಿಸಿಲು ತಂಪಿನ ಗಾನದಿಂಪಿನ ಕೂಡಿಗೆ

ನಗರ ನಾಗರಿಕತೆಯ ಗಲಿಬಿಲಿ ಅಲ್ಲಿ ಸೋಂಕದು, ಸುಳಿಯದು
ದೇಶದೇಶದ ವೈರಯುದ್ಧದ ಸುದ್ದಿಯೊಂದೂ ತಿಳಿಯದು
ತಿಳಿಯದಿರುವುದೆ ತಿಳಿವು ಎಂಬುವ ನನ್ನಿ ಆಯಡೆ ತಿಳಿವುದು
ತಿಳಿಯೆ ನೋವಿರೆ, ತಿಳಿಯದಿರುವುದೆ ಜಾಣ್ಮೆ ಎಂಬರಿವುಳಿವುದು!"[೨]

ಮಲೆನಾಡಿನ ಹಳ್ಳಿಯ ಸೊಬಗನ್ನು ವಿವರಿಸುವ ಕವಿಯು ಅಲ್ಲಿನ ಪ್ರಕೃತಿ ಸೌಂದರ್ಯಕ್ಕೆ ಮಾರುಹೋಗಿದ್ದಾರೆ. ಹಳ್ಳಿಗಳ ಅವನತಿಗೆ ಕಾರಣವಾಗಿರುವ

---

೧. ಕುವೆಂಪು, ಹಾಳೂರು, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೬, ಪು. ೧೧

೨. ಸಿ.ಪಿ.ಕೆ. ಕುವೆಂಪು ಅವರ ಆಯ್ದ ಕವಿತೆಗಳು (ಸಂ.), ಬಾಪ್ಕೋ ಪ್ರಕಾಶನ, ಬೆಂಗಳೂರು, ಪು. ೨೯.

ನಗರಪಟ್ಟಣಗಳನ್ನು ಕಂಡು ಅದೊಂದು ಬೋಳು ಬಯಲೆಂದು ಬೇಸರವನ್ನು ವ್ಯಕ್ತಪಡಿಸುತ್ತಿದ್ದಾರೆ. ನಗರ ಪ್ರದೇಶಗಳಲ್ಲಿ ಯಾವಾಗಲು ಗಲಿಬಿಲಿ ಎಂಬ ಜಂಜಾಟದ ಜೀವನ, ದೇಶ-ದೇಶಗಳೇ ಕಿತ್ತಾಡುತ್ತವೆ ನೆಮ್ಮದಿಯಿಂದ ಊಟ ನಿದ್ರೆ ಮಾಡಲು ಸಾಧ್ಯವಾಗದ ಅಂತಹ ಪ್ರದೇಶದಲ್ಲಿ ಇರಲು ಸಾಧ್ಯವಾಗದೆ ಕವಿಯು ಸದಾ ಹಚ್ಚ ಹಸುರಿನಿಂದ ಕೂಡಿರುವ ತನ್ನ ತವರು ಮನೆಯಾದ ಮಲೆನಾಡಿಗೆ ಹೋಗುವೆನೆಂದು ಹೇಳುತ್ತಾರೆ.

ಇಂತಹ ನಗರ ಪ್ರದೇಶಗಳು ಹಾಳಾಗಿರುವಂತೆ ಈಗಿನ ಹಳ್ಳಿಗಳು ಕೂಡ ಅದರ ವ್ಯಾಮೋಹಕ್ಕೆ ಬಲಿಯಾಗಿ ತನ್ನ ಪ್ರಕೃತಿ ಸೌಂದರ್ಯವನ್ನು ಕಳೆದುಕೊಳ್ಳುತ್ತಿದೆ. ಈಗಿನ ಹಳ್ಳಿ ಜೀವನವು ಕೂಡ ಪಟ್ಟಣ ಜೀವನದಂತೆ ಬದಲಾಗುತ್ತಿರುವುದನ್ನು ನಮ್ಮ ಸುತ್ತಮುತ್ತಲಿನಲ್ಲೇ ಕಾಣಬಹುದಾಗಿದೆ.

"ಕೋಕಿಲೆಯೆ, ನಿನ್ನನಣಕಿಪರೊಬ್ಬರಿಲ್ಲ;
ಗೊರವಂಕವೇ, ನಿನ್ನ ಚಾಳಿಸುವರಿಲ್ಲ;
ಲಾವುಗೆಯ, ನಿನ್ನ ಮೂದಲಿಪರಾರಿಲ್ಲ;
ಎಲೆ ಚೋರೆಯೇ, ನಿನ್ನ ಹಂಗಿಸುವರಿಲ್ಲ!
ಹಕ್ಕಿಗಳೆ, ನಿಮ್ಮ ಹರುಷೋತ್ಸವದಿ ಕೂಡಿ
ನಲಿದಾಡುವವರಿಲ್ಲ ನಿಮ್ಮೊಡನೆ ಹಾಡಿ
ಮಲ್ಲಿಗೆಯೆ, ನಿನಗೆ ನೀರೆರೆವವಳು ಇಲ್ಲ;
ಸೇವಂತಿಗೆಯೆ, ನಿನಗೆ ಮುತ್ತಿಡುವರಿಲ್ಲ
ಕೊಳದ ತಾವರೆ, ನಿನ್ನ ಪೀಡಿಸುವರಿಲ್ಲ
ಎಲೆ ಶಿರೀಷವೆ, ನಿನ್ನ ನೋಯಿಸುವರಿಲ್ಲ
ಎಲೆ ವನಸ್ಥಳಗಳಿರ, ನಿಮ್ಮೊಡನೆ ಸೇರಿ
ನಲಿವರನು ನುಂಗಿತ್ತೈ ಪಟ್ಟಣದ ಮಾರಿ!"[೧]

ಈ ಮೇಲಿನ ಕವನದ ಸಾಲುಗಳನ್ನು ಗಮನಿಸಿದಾಗ ಕುವೆಂಪು ತಮ್ಮ ಜೀವನದಲ್ಲಿ ಎಷ್ಟು ಬಗೆಯ ಹೂವುಗಳನ್ನು, ಪಕ್ಷಿಗಳನ್ನು ನೋಡಿರಬೇಕಲ್ಲವೇ! ಅಂತಹ ಪಕ್ಷಿಗಳನ್ನು ಹೂವುಗಳನ್ನು ತಮ್ಮ ಕವನದ ಮೂಲಕ ಮಕ್ಕಳಿಗೆ ಪರಿಚಯಿಸಿದ್ದಾರೆ.

ಈ ರೀತಿ ಎಲ್ಲಾ ಬಗೆಯಲ್ಲೂ ಕಂಗೊಳಿಸುತ್ತಿದ್ದ ಹಳ್ಳಿಯನ್ನು ಪಟ್ಟಣವು ಒಂದು ಮಾರಿಯಾಗಿ ಬಂದು ನುಂಗಿಕೊಂಡಿರುವುದು ಕವಿಗೆ ದುಃಖದ ಸಂಗತಿಯಾಗಿದೆ.

೧. ಕುವೆಂಪು, ಹಾಳೂರು, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೬, ಪು. ೨೨

'ಹೋಗುವೆನು ನಾ' ಎಂಬ ಕವನದಲ್ಲಿ ತಿಳಿಸಿರುವಂತೆ ಆಗಿನ ಮಲೆನಾಡ ಹಳ್ಳಿಯ ಪರಿಸರದಂತೆ ಈಗಿನ ಹಳ್ಳಿಗಳ ಪರಿಸರವಿಲ್ಲವೆಂದು ಕವಿಯು ತನ್ನ ಅಳಲನ್ನು ತೋಡಿಕೊಳ್ಳುತ್ತಿದ್ದಾರೆ.

ಕುವೆಂಪುರವರಿಗೆ ಅತೀ ಹೆಚ್ಚಿನ ರೀತಿಯಲ್ಲಿ ಪ್ರಖ್ಯಾತಿಗೆ ಒಳಪಡಿಸಿದಂತಹ ಕೃತಿಯೇ 'ಬೊಮ್ಮನಹಳ್ಳಿಯ ಕಿಂದರಿ ಜೋಗಿ'. ಈ ಕವನದಲ್ಲಿ ಬೊಮ್ಮನ ಹಳ್ಳಿಯ ಜನರೆಲ್ಲರೂ ಇಲಿಗಳ ಕಾಟದಿಂದ ಸಂಕಷ್ಟಕ್ಕೆ ಸಿಲುಕುತ್ತಾರೆ. ಆದರೆ, ಈ ಕವನವನ್ನು ಓದಿದ ಪ್ರತಿಯೊಬ್ಬರು ಕೂಡ ನಗುವಿನ ಅಲೆಯನ್ನೇ ಹರಿಸುತ್ತಾರೆ. ಏಕೆಂದರೆ ಕುವೆಂಪುರವರ ಈ ಕವನದಲ್ಲಿ ಮಾಡಿರುವ ಪದಗಳ ಜೋಡಣೆಯು ಮಕ್ಕಳಿಗಲ್ಲದೆ ಹಿರಿಯರಿಗೂ ಕೂಡ ಆಕರ್ಷಣೆಗೊಂಡು ಹಾಸ್ಯದ ಹೊನಲನ್ನೇ ಹುಟ್ಟಿಸುತ್ತದೆ.

ತುಂಗಾತೀರವೆಂದೇ ಪ್ರಾರಂಭವಾಗುವ ಈ ಕವನದಲ್ಲಿ ಇಲಿಗಳ ಕಾಟದಿಂದ ಆ ಹಳ್ಳಿಯ ಜನರು ಬೇಸತ್ತಿರುವ ಸಂದರ್ಭದಲ್ಲಿ ದೇವರಂತೆ ಬಂದು ಹಳ್ಳಿಯ ಸಮಸ್ಯೆಯನ್ನು ಬಗೆಹರಿಸಿದವನು. 'ಕಿಂದಿರಿಜೊಗಿ'. ತನ್ನ ಕಿಂದರಿನಾದದ ಮೂಲಕ ಎಲ್ಲರನ್ನು ಆಕರ್ಷಿಸಿ ಇಲಿಗಳ ಕಾಟದಿಂದ ಮುಕ್ತಿ ಕೊಡಿಸುತ್ತಾನೆ.

ಒಂದು ಸನ್ನಿವೇಶದಲ್ಲಿ ಕೊಟ್ಟ ಮಾತಿನಂತೆ ನಡೆದುಕೊಳ್ಳದ ಆ ಊರ ಗೌಡನಿಗೆ ಪಾಠ ಕಲಿಸಲು ತನ್ನ ಕಿಂದರಿನಾದದ ಮೂಲಕ ಅಲ್ಲಿನ ಮಕ್ಕಳನ್ನು ತನ್ನ ಕಡೆ ಆಕರ್ಷಿಸಿಕೊಳ್ಳುತ್ತಾನೆ. ಇದರಿಂದ ಮಕ್ಕಳು ತನ್ನ ತಂದೆ-ತಾಯಿ ಮನೆಯನ್ನು ಬಿಟ್ಟು ಜೋಗಿಯನ್ನು ಹಿಂಬಾಲಿಸಿಕೊಂಡು ಹೋಗುತ್ತವೆ.

ಹಿಂಬಾಲಿಸಿಕೊಂಡು ಹೋದಂತಹ ಮಕ್ಕಳಿಗೆ ಜೋಗಿಯು ತನ್ನ ಕಿಂದರಿನಾದದಿಂದ ಹೊಸ ಲೋಕವನ್ನೇ ಸೃಷ್ಟಿಸುತ್ತಾನೆ. ಅಂತಹ ಲೋಕವನ್ನು ಅದೇ ಹಳ್ಳಿಯ ಕುಂಟ ಬಾಲಕನು ಪರಿಚಯಿಸುವ ಪರಿ ಈ ರೀತಿ ಇದೆ:

"ಅಯ್ಯೋ ಎನಗಿಲ್ಲವರಾನಂದ!
ಜೋಗಿಯು ಕಿಂದರಿ ಬಾರಿಸೆ ಕಂಡೆವು

ಬಣ್ಣದ ಮನೆಗಳ ಪಟ್ಟಣವ
ಹಣ್ಣುಗಳುದುರಿದ ತೋಟಗಳ!

ನಾನಾ ಆಟದ ಸಾಮಾನುಗಳ
ತರತರ ರಾಗದ ಗೊಂಬೆಗಳ:

ಮಾತಿಗೆ ಮೀರಿದ ಆನಂದಗಳ
ಕೈಗೇ ಸಿಕ್ಕುವ ಹಕ್ಕಿಗಳ!

ಜಿಂಕೆಗಳೆಮ್ಮೊಡನಾಡಿದುವಲ್ಲಿ,
ಮೊಲಗಳು ಕುಳಿತುವು ಮೈಮೇಲಲ್ಲಿ!

ಅಯ್ಯೋ ಹೋಯಿತೆ ಆ ನಾಕ!
ಅಯ್ಯೋ ಬಂದಿತೆ ಈ ಲೋಕ!" [೧]

ಕಿಂದರಿ ನಾದದಿಂದ ಕಂಡಂತಹ ಲೋಕವು ಮಕ್ಕಳಿಗೆ ಹೊಸತನವನ್ನು ಹುಟ್ಟಿಸಿದೆ. ಬಣ್ಣಬಣ್ಣದ ಮನೆಗಳಿಂದ ಕೂಡಿದ್ದು, ಹಚ್ಚ ಹಸುರಿನಿಂದ ಕಂಗೊಳಿಸುವ ತೋಟಗಳು ಆ ತೋಟಗಳಲ್ಲಿರುವ ಸವಿಯಾದ ಹಣ್ಣುಗಳು, ತಮಗೆ ಆಟವಾಡಲು ಬೇಕಾದ ತರತರಾವರಿಯ ಆಟದ ಸಾಮಾನುಗಳು, ಅಲ್ಲಿದ್ದಂತಹ ಜಿಂಕೆ-ಮೊಲಗಳನ್ನು ಕಂಡಂತಹ ಮಕ್ಕಳ ಆನಂದ ಮುಗಿಲ ಮುಟ್ಟಿತು. ತಮ್ಮ ಹಳ್ಳಿಯಲ್ಲಿ ಸಿಗದೇ ಇರುವುದೆಲ್ಲವನ್ನು ಈ ಲೋಕದಲ್ಲಿ ಕಂಡು ಆಡಿ ನಲಿದರು.

ಕುವೆಂಪು ಈ ಕವನದ ಮೂಲಕ ಕೇವಲ ಬೊಮ್ಮನ ಹಳ್ಳಿಯ ಮಕ್ಕಳನ್ನಲ್ಲದೆ ಪ್ರತಿಯೊಂದು ಮಗುವನ್ನು ಆ ಕಿನ್ನರಿ ಲೋಕಕ್ಕೆ ಕರೆದೊಯ್ಯುತ್ತಾರೆ. ಅಂತಹ ಶಕ್ತಿಯನ್ನು ಕುವೆಂಪು ಈ ಕವನದ ಮೂಲಕ ತೋರ್ಪಡಿಸಿದ್ದಾರೆ.

ಇನ್ನೊಂದು ಕಡೆ ಗಮನಿಸುವುದಾದರೆ, ಕುವೆಂಪುರವರ ಮಲೆನಾಡು ಕೂಡ ಇದೇ ರೀತಿ ಬಣ್ಣದಿಂದ ಕೂಡಿದ ಮನೆಗಳು. ಹಚ್ಚ ಹಸುರಿನ ಸೊಂಪಾದ ಮರ-ಗಿಡಗಳು, ತೋಟ-ಗದ್ದೆಗಳು, ಪ್ರಾಣಿ-ಪಕ್ಷಿಗಳಿಂದ ಕೂಡಿತ್ತು ಎಂದು ನಾವು ಭಾವಿಸಬಹುದು.

ಹೀಗೆ ಕವಿಯು ಮಕ್ಕಳನ್ನು ಹೊಸಲೋಕಕ್ಕೆ ಕರೆದೊಯ್ಯುವುದರ ಮೂಲಕ ಅವರಲ್ಲಿ ನವಚೈತನ್ಯವನ್ನು ತುಂಬುತ್ತಿದ್ದಾರೆ.

ಕುವೆಂಪುರವರ ಮಕ್ಕಳ ಸಾಹಿತ್ಯದ ಪ್ರಕಾರಗಳಲ್ಲಿ ನಾಟಕವು ಕೂಡ ಒಂದಾಗಿದೆ. ಇದು ಒಟ್ಟು ಎರಡು ನಾಟಕಗಳನ್ನು ಒಳಗೊಂಡಿದೆ. ಮೊದಲು ನಾವು 'ನನ್ನ ಗೋಪಾಲ' ಎಂಬ ನಾಟಕವನ್ನು ಅವಲೋಕಿಸುವುದಾದರೆ, ಈ ನಾಟಕದಲ್ಲಿ 'ಗೋಪಾಲ, ಗೋಪಾಲನ ತಾಯಿ, ಬನದ ಗೋಪಾಲ' ಮುಖ್ಯ ಪಾತ್ರಧಾರಿಗಳಾಗಿರುತ್ತಾರೆ. ಉಳಿದಂತೆ 'ಗೋಪಾಲನಗುರು ಮತ್ತು ಗೋಪಾಲನ ಸ್ನೇಹಿತರನ್ನು' ಈ ನಾಟಕದಲ್ಲಿ ಕಾಣಬಹುದಾಗಿದೆ.

---

೧. ಕುವೆಂಪು, ಬೊಮ್ಮನಹಳ್ಳಿಯ ಕಿಂದರಿ ಜೋಗಿ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೭೩, ಪು. ೨೭.

ಕೃಷ್ಣನ ಪರಮಭಕ್ತೆಯಾಗಿರುವ ಗೋಪಾಲನ ತಾಯಿಗೆ ಒಬ್ಬನೇ ಒಬ್ಬ ಮಗ 'ಗೋಪಾಲ'. ಗಂಡನನ್ನು ಕಳೆದುಕೊಂಡಿರುವ ಈಕೆ ನೂಲು ಮಾರಿ ಬಂದ ಹಣದಿಂದ ತನ್ನ ಮಗನನ್ನು ಓದಿಸುತ್ತಾ ಸಂತೋಷದಿಂದ ಗೋಪಾಲನನ್ನು ಭಜಿಸುತ್ತ ಜೀವನವನ್ನು ಸಾಗಿಸುತ್ತಿರುತ್ತಾಳೆ.

ಎಂದಿನಂತೆ ತನ್ನ ಮಗನನ್ನು ಶಾಲೆಗೆ ಕಳುಹಿಸಲು ಮುಂಜಾನೆಯೆದ್ದು ಮಲಗಿರುವ ಗೋಪಾಲನನ್ನು ತಾಯಿಯು ಎದ್ದೇಳಿಸುವ ಪರಿ ಎಷ್ಟು ಸೊಗಸಾಗಿದೆ ಎಂಬುದನ್ನು ಈ ಕೆಳಗಿನ ಮಾತುಗಳ ಮೂಲಕ ತಿಳಿಯಬಹುದು.

"ಗೋಪಾಲ, ಬೆಳಗಾಯ್ತು, ಮೇಲೇಳು; ನೋಡಲ್ಲಿ, ಸೂರ್ಯನಾರಾಯಣನು ತನ್ನ ಚಿನ್ನದ ಕಿರಣಗಳಿಂದ ಬಾವಿಯ ಬಳಿಯ ತೆಂಗಿನ ಮರದ ತುದಿಯಲ್ಲಿ ತೊಳಗುತ್ತಿದ್ದಾನೆ. ಕೇಳಲ್ಲಿ ಹಕ್ಕಿಗಳು ಹಾಡುತ್ತ, ಹಾರಾಡಿ ಕರೆಯುತ್ತಿವೆ ನಿನ್ನ ಹೂಗಳು ಅರಳಿ ಬನದಲ್ಲಿ ನಿನಗಾಗಿ ಕಾದುಕೊಂಡಿವೆ. ಏಳು ಗೋಪಾಲ, ನನ್ನ ಕಂದಾ"[೧]

ಕವಿಯು ಇಂತಹ ಪ್ರತಿಯೊಂದು ಸನ್ನಿವೇಶದಲ್ಲೂ ನಿಸರ್ಗದಲ್ಲಿರುವ ಸೌಂದರ್ಯವನ್ನು ಮಕ್ಕಳಿಗೆ ಬಿಂಬಿಸುತ್ತಿದ್ದಾನೆ. ಇಲ್ಲಿ ಸೂರ್ಯನನ್ನು ದೇವರ ಒಂದು ಸ್ವರೂಪವಾಗಿ ನಾರಾಯಣ ಎಂದು ಸಂಬೋಧಿಸಿರುವುದು, ಆ ಸೂರ್ಯನ ಬಿಸಿಲನ್ನು ಚಿನ್ನದ ಕಿರಣಗಳೆಂದು ಭಾವಿಸಿ, ಅದು ತೆಂಗಿನ ಮರದ ತುದಿಯ ಮೂಲಕ ಇಣುಕಿ ನೋಡುತ್ತಿರುವ ರೀತಿ. ಹಾಗೆಯೇ ಹಕ್ಕಿಗಳು ಹಾಡುತ್ತಾ, ಹಾರಾಡುತ್ತಾ ಗೋಪಾಲನನ್ನೇ ಕರೆಯುತಿರುವಂತೆ. ಬನದಲ್ಲಿರುವ ಹೂಗಳೆಲ್ಲ ಅರಳಿ ನಿಂತು ಇಷ್ಟು ಹೊತ್ತಾದರೂ ಗೋಪಾಲನಿನ್ನು ಬರಲಿಲ್ಲವೆಂದು ಕಾಯುತ್ತಿರುವಂತೆ ಕವಿ ಎಷ್ಟು ಅಮೋಘವಾಗಿ ಮಕ್ಕಳ ಮನಸ್ಸನ್ನು ಸೂರೆಗೊಳ್ಳುವಂತೆ ಚಿತ್ರಿಸಿದ್ದಾರೆ ಎಂಬುದಕ್ಕೆ ಈ ನಾಟಕವೆ ಸಾಕ್ಷಿಯಾಗಿದೆ.

ದಿನನಿತ್ಯದಂತೆ ಗೋಪಾಲನ ಪೂಜೆಗೆ ಬೇಕಾದ ಹೂವುಗಳನ್ನು ತರಲು ಬನಕ್ಕೆ ಹೋಗುತ್ತಾನೆ ಈ ಪುಟ್ಟಗೋಪಾಲ. ಬನದ ಸೊಗಸಿಗೆ ಮರುಳಾದ ಈ ಗೋಪಾಲನು ತನ್ನ ತಾಯಿಯ ಬಳಿ ಬಂದು ಬನದ ಸೌಂದರ್ಯವನ್ನು ಹೀಗೆ ವಿವರಿಸುತ್ತಾನೆ.

"ಬನದಲ್ಲಿ ಏನಮ್ಮ ಸೊಗಸು! ಏನು ಆನಂದ! ಮಲ್ಲಿಗೆಯ ಹೂವು. ಕೇದಗೆಯ ಹೂವು, ಸಂಪಿಗೆಯ ಹೂವು, ಪರ್ವತಬಾಳೆಯ ಹೂವು, ಗೋರಂಟೆಯ ಹೂವು! ಏನಮ್ಮ, ಸಾವಿರಾರು ಮಳೆಬಿಲ್ಲುಗಳು ಸೇರಿ ಕುಣಿದಂತೆ ತೋರಿತ್ತು. ಆಮೇಲೆ ಹಕ್ಕಿಗಳ ಇಂಪಾದ

---

೧. ದೇಜಗೌ., ಜಿ.ಎಸ್.ಶಿವರುದ್ರಪ್ಪ, ಪ್ರಧಾನ್ ಗುರುದತ್ತ, ಕುವೆಂಪು ಸಂಚಯ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೦೯, ಪು. ೩೭೮.

ಗಾನ! ತಂಗಾಳಿ! ಸೂರ್ಯದೇವನ ಹೊಂಬೆಳಕು! ಹಸರಾದ ಚಿಗುರು ಹುಲ್ಲಿನ ಮೇಲೆ ಕೋಟ್ಯಂತರ ಹಿಮಮಣಿಗಳು ಮಿರುಗುವ ಲೀಲೆ! ಮನೆಗಿಂತ ಬನವೇ ಸೊಗಸಮ್ಮ"೧

ಇಲ್ಲಿ ಕವಿಯು ನಿಸರ್ಗ ಸೌಂದರ್ಯದಿಂದ ತುಂಬಿಕೊಂಡಿರುವ ಆ ಬನವನ್ನು ನೋಡಿದ ಆ ಮುಗ್ಧ ಪುಟ್ಟ ಬಾಲಕನ ಮನಸ್ಸಿನಲ್ಲಿಯೇ ಪ್ರಕೃತಿಯಲ್ಲಿರುವ ಸವಿಯನ್ನು ಉಣಬಡಿಸಿದ್ದಾರೆ. ಈ ಮೇಲೆ ತಿಳಿಸಿರುವಂತೆ ಅನೇಕ ಹೂವುಗಳನ್ನು ಕವಿ ಪರಿಚಯಿಸಿ, ಅಲ್ಲಿನ ತಂಗಾಳಿ, ಹಕ್ಕಿಗಳ ಗಾನ, ಸೂರ್ಯನ ಹೊಂಬೆಳಕು, ಹಿಮಮಣಿಗಳೆಲ್ಲ ಹಸುರಿನ ಹುಲ್ಲಿನ ಮೇಲೆ ಮಿಂಚಿನಂತೆ ಮಿರುಗುತ್ತಿರುವುದನ್ನು ಗೋಪಾಲನ ಮೂಲಕ ಕುವೆಂಪು ಎಷ್ಟು ಚೆಂದವಾಗಿ ತಿಳಿಸಿದ್ದಾರಲ್ಲವೇ!

ಈ ಪುಟ್ಟ ಗೋಪಾಲನು ತನ್ನ ಶಾಲೆಗೆ ದಿನನಿತ್ಯ ಆ ಬನದ ಮೂಲಕವೇ ಹೋಗಬೇಕಾದ್ದರಿಂದ ತನಗೆ ಭಯವಾದಾಗ ಒಬ್ಬನೇ ಇರುವೆನು. ಆ ಸಂದರ್ಭದಲ್ಲಿ ಏನು ಮಾಡಲಿ ಎಂದು ತನ್ನ ತಾಯಿಯ ಬಳಿ ಗೋಪಾಲ ಕೇಳುತ್ತಾನೆ. ನಿನ್ನಣ್ಣ, ನನ್ನ ಹಿರಿಯ ಮಗ ಕಾಡಿನಲ್ಲಿ ಯಾವಾಗಲೂ ದನ ಕಾಯುತ್ತಾ ಇರುತ್ತಾನೆ. ನೀನು ಕರೆದಾಗ ಬರುವನೆಂದು ಧೈರ್ಯ ಹೇಳಿ ಶಾಲೆಗೆ ಕಳುಹಿಸುತ್ತಾಳೆ.

ತನ್ನ ತಾಯಿಯ ಮಾತಿನಂತೆ ಗೋಪಾಲನು ಶಾಲೆಗೆ ಹೋಗಿ ಹಿಂತಿರುಗಿ ಮನೆಗೆ ಬರುವಾಗ ಕತ್ತಲು ಆವರಿಸಿಬಿಡುತ್ತದೆ. ಅದಕ್ಕೆ ಸ್ವಲ್ಪ ಭಯಗೊಂಡು ನಿಂತಿದ್ದಾಗ ತನ್ನ ತಾಯಿಯ ಮಾತು ನೆನಪಾಗಿ 'ಗೋಪಾಲಣ್ಣಾ' ಎಂದು ಕರೆದಾಗ ಬನದ ಗೋಪಾಲನ ದರ್ಶನವಾಗಿ ಈ ಪುಟ್ಟ ಗೋಪಾಲನು ಸ್ವಲ್ಪ ಹೊತ್ತು ಬನದ ಗೋಪಾಲನ ಸಂಗಡ ಮಾತನಾಡಿ ಮನೆಗೆ ಹಿಂತಿರುಗುತ್ತಾನೆ.

ಇತ್ತ ಕಡೆ ತನ್ನ ಮಗ ಇಷ್ಟು ಹೊತ್ತಾದರೂ ಮನೆಗಿನ್ನೂ ಬಂದಿಲ್ಲವೆಂದು ಈ ಮಾತುಗಳ ಮೂಲಕ ಕಳವಳಿಸುತ್ತಾಳೆ:

"ಸೂರ್ಯನೂ ಮುಳುಗಿದನು. ಹಕ್ಕಿಗಳು ಗೂಡಿಗೆ ಹೋದವು. ದನಗಳೆಲ್ಲಾ ಕೊಟ್ಟಿಗೆಗೆ ಬಂದವು. ತಾರೆಗಳೂ ಒಂದೊಂದಾಗಿ ಮೂಡುತ್ತಿವೆ. ಕತ್ತಲೂ ಹಬ್ಬುತ್ತಿದೆ. ಗೋಪಾಲನೇಕೆ ಇನ್ನೂ ಬರಲಿಲ್ಲ?"೨

ಈ ರೀತಿಯಾಗಿ ತನ್ನ ಮಗನು ಕತ್ತಲಾದರೂ ಮನೆಗೆ ಬಂದಿಲ್ಲವೆಂದು ಆತಂಕವನ್ನು ವ್ಯಕ್ತಪಡಿಸುತ್ತಾಳೆ. ಹಾಗೆಯೇ, ಇಲ್ಲಿ ಕವಿಯು ಸಂಜೆ ಸೂರ್ಯ ಮುಳುಗುವ ಸಂದರ್ಭದಲ್ಲಿ

---

೧. ದೇಜಗೌ., ಜಿ.ಎಸ್.ಶಿವರುದ್ರಪ್ಪ, ಪ್ರಧಾನ್ ಗುರುದತ್ತ, ಕುವೆಂಪು ಸಂಚಯ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೦೯, ಪು. ೩೭೯.

೨. ಅದೇ., ಪು. ೩೮೩

ಪ್ರಕೃತಿಯಲ್ಲಿ ಯಾವ ರೀತಿ ಬದಲಾವಣೆಗಳಾಗುತ್ತವೆ ಎಂಬುದನ್ನು ಸೊಗಸಾಗಿ ಪರಿಚಯಿಸಿದ್ದಾರೆ.

ಸಂಜೆ ಕತ್ತಲಾಗುತ್ತಿದ್ದಂತೆ ಮನುಷ್ಯರಾದ ನಾವುಗಳು ಹೇಗೆ ನಮ್ಮ ಗೂಡಾದ ಮನೆಯನ್ನು ಸೇರುತ್ತೇವೆಯೊ ಅದೇ ರೀತಿ ಕತ್ತಲು ಆವರಿಸುತ್ತಿದ್ದಂತೆ ಹಕ್ಕಿಗಳು ಗೂಡನ್ನು, ದನಗಳು ಕೊಟ್ಟಿಗೆಯನ್ನು ಸೇರುತ್ತವೆ. ಆ ಕತ್ತಲಿನಲ್ಲಿ ಆಕಾಶದಲ್ಲಿ ತಾರೆಗಳು ಮೂಡಿ ಮಿನುಗುತ್ತಿರುತ್ತದೆ ಎಂಬುದನ್ನು ಕುವೆಂಪು ಮಕ್ಕಳಿಗೆ ತಿಳಿಸುತ್ತಿದ್ದಾರೆ.

ಇದೇ ರೀತಿ ನಾಟಕವು ಮುಂದೆ ಸಾಗಿದಂತೆ ಪುಟ್ಟಗೋಪಾಲನು ಬನದ ಗೋಪಾಲನಿಗೆ ತನ್ನ ತಾಯಿಯು ಕೊಟ್ಟ ಅವಲಕ್ಕಿ ಮೊಸರನ್ನು ಕೊಡಲು ಭೇಟಿ ಮಾಡುತ್ತಾನೆ. ಭೇಟಿ ಮಾಡಿದ ಸಂದರ್ಭದಲ್ಲಿ ಗೋಪಾಲನು ಬನದ ಗೋಪಾಲ ಹತ್ತಿರ ಕೊಳಲೂದಿಸುತ್ತಾನೆ. ಆ ಕೊಳಲಿನ ನಾದಕ್ಕೆ ಮೈ ಮರೆತು ಮಗ್ನನಾಗುತ್ತಾನೆ ಈ ಪುಟ್ಟ ಗೋಪಾಲ.

ಆ ಕೊಳಲಿನ ನಾದದಿಂದ ತಾನು ಬೇರೊಂದು ಲೋಕಕ್ಕೆ ಹೋಗಿದ್ದೆನೆಂದು ತನ್ನ ತಾಯಿಯ ಬಳಿ ಹೇಳುತ್ತಾನೆ. ಆ ಇಂಪಾದ ನಾದದಿಂದ ಮೈಮರೆತ ಗೋಪಾಲನು ಈ ರೀತಿ ವಿವರಿಸುತ್ತಾನೆ.

"ಅದು ಯಾವ ದೇಶವೋ ನನಗೆ ತಿಳಿಯದು. ಅಲ್ಲಿ ಹರಿಯುತ್ತಿದ್ದ ಒಂದು ಹೊಳೆ ನಿಂತು ಗಾನವನ್ನಾಲಿಸುತ್ತಿತ್ತು. ದನಗಳು ಹಾಗೆಯೇ ಕಲ್ಲು ಮರಗಳು ಕುಣಿದಾಡಿಬಿಟ್ಟವು. ಜಿಂಕೆಗಳ ಗುಂಪೊಂದು ಅಲ್ಲಿ ನಿಂತು ಕೊಳಲನ್ನು ಕೇಳುತ್ತಿತ್ತು. ಅಲ್ಲಿಯ ಬನಗಳು ಏನು ರಮಣೀಯವಾದವುಗಳಮ್ಮಾ! ಗೊಂಚಲು ಗೊಂಚಲಾಗಿ ಹಣ್ಣು ಹೂಗಳು ಜೋಲಾಡುತ್ತಿದ್ದವು. ಮಕರಂದವನ್ನು ಹೀರಲೆಂದು ಹಾರಾಡುತ್ತಿದ್ದ ತುಂಬಿಗಳ ಝೇಂಕಾರವಂತೂ ಆ ಬನದಲ್ಲೆಲ್ಲ ತುಂಬಿ ಹೋಗಿತ್ತು. ಏನಮ್ಮ; ಬಣ್ಣ ಬಣ್ಣದ ಹಕ್ಕಿಗಳು! ತರತರದ ಮಧುರತಾನ! ಮಲಯದೆಲರು ತಳಿರ ನಡುವೆ ಮೆಲ್ಲಮೆಲ್ಲನೆ ಸುಳಿಸುಳಿದು ನಲಿದಾಡುತ್ತಿತ್ತು. ಹಸುರಂತೂ ಮೃದುವಾದ ಹಾಸಗೆಯಂತೆ ಹಬ್ಬಿಕೊಂಡು ಮುಗುಳು ನಗೆಯನ್ನು ಹೊರಸೂಸುತ್ತಿತ್ತು. ಅಮ್ಮ ಅಲ್ಲಲ್ಲಿ ಬಣ್ಣದ ಬಟ್ಟೆಗಳನ್ನುಟ್ಟುಕೊಂಡು ಬಣ್ಣದ ಹೂಗಳನ್ನು ಮುಡಿದುಕೊಂಡು ಸಡಗರದಿಂದ ತಿರುಗಾಡುವ, ಓಡುವ, ಹಾಡುವ ದಿವ್ಯ ಮೂರ್ತಿಗಳನ್ನೂ ನೋಡಿದೆ!"[೧] ಎಂದು ಗೋಪಾಲನು ವಿವರವಾಗಿ ಎಲ್ಲವನ್ನು ಹೇಳುತ್ತಾನೆ. ಮಲೆನಾಡಿನ ಸೌಂದರ್ಯವನ್ನು ಆಸ್ವಾದಿಸಿರುವ ಕವಿ ಕುವೆಂಪು ಮಾತ್ರ ಈ ರೀತಿಯಾಗಿ

---

೧. ದೇಜಗೌ., ಜಿ.ಎಸ್.ಶಿವರುದ್ರಪ್ಪ, ಪ್ರಧಾನ್ ಗುರುದತ್ತ, ಕುವೆಂಪು ಸಂಚಯ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೦೯, ಪು. ೩೯೩

ಪ್ರಕೃತಿಯಲ್ಲಿನ ಚೆಲುವನ್ನು, ಅದರ ಸೊಗಸನ್ನು ರಮಣೀಯವಾಗಿ ಚಿತ್ರಿಸಲು ಸಾಧ್ಯ. ಪ್ರತಿಯೊಂದು ವಸ್ತುವನ್ನು ಕಂಡಾಗಲು ಕೂಡ ಅದರಲ್ಲಿರುವ ಚೆಲುವನ್ನು ಆಸ್ವಾದಿಸಿ, ಅನುಭವಿಸಿ ಇತರರಿಗೂ ಅದರ ಚಿತ್ರಣವನ್ನು ಬಿಡಿಬಿಡಿಯಾಗಿ ಚಿತ್ರಿಸುತ್ತಾ ಹೋಗುತ್ತಾರೆ. ಅದಕ್ಕೆ ಅಲ್ಲವೇ ಇವರು 'ನಿಸರ್ಗ ಕವಿ' ಎಂದೇ ಪ್ರಖ್ಯಾತಿಯಾಗಿರುವುದು.

ಕುವೆಂಪುರವರ ಮಕ್ಕಳ ಸಾಹಿತ್ಯದಲ್ಲಿ ಬರುವ ಮತ್ತೊಂದು ನಾಟಕವೆಂದರೆ 'ಮೋಡಣ್ಣನ ತಮ್ಮ'. ಈ ನಾಟಕದಲ್ಲಿ ಮುಖ್ಯವಾಗಿ ಬರುವ ಪಾತ್ರಗಳೆಂದರೆ 'ಹುಡುಗ, ಮೋಡ, ಗಿರಿ, ಕಾಡು ಮತ್ತು ಹುಡುಗನ ತಾಯಿ'. ಇದರಲ್ಲಿ ಇಡೀ ನಾಟಕವು ಪ್ರಕೃತಿಯಲ್ಲೇ ಒಂದಾದ ಮೋಡದ ಜೊತೆ ಪ್ರಕೃತಿ ಪ್ರಿಯನಾದ ಒಬ್ಬ ಬಾಲಕನು ಮಾತಿಗಾರಂಭಿಸುತ್ತಾನೆ. ಅಂತಹ ಸ್ವಾರಸ್ಯಕರವಾದ ಮಾತುಗಳನ್ನು ಈ ನಾಟಕದಲ್ಲಿ ನೋಡಬಹುದಾಗಿದೆ.

ಒಬ್ಬ ಪುಟ್ಟ ಬಾಲಕನು ಗಗನದ ಕಡೆ ನೋಡುತ್ತ ಅಲ್ಲಿ ಒಂಟಿಯಾಗಿ ತೇಲುತ್ತಿದ್ದ ಮೋಡವನ್ನು ಕಂಡು ಸಂತೋಷದಿಂದ ಹೀಗೆ ಹೇಳುತ್ತಾನೆ.

(ಹುಡುಗ)

"ಓ ಮೋಡಣ್ಣಾ, ಓ ಮೋಡಣ್ಣಾ,
ನಾನು ಬರುವೆನೊ ಕೈ ನೀಡಣ್ಣಾ!

(ಮೋಡ)

ಬರಬೇಡಣ್ಣಾ! ಬರಬೇಡಣ್ಣಾ!
ಅವ್ವನು ಬೈವಳು ನೀ ನೋಡಣ್ಣಾ!"[೧]

ಮೋಡವನ್ನು ಕಂಡಂತಹ ಬಾಲಕ ಮೋಡದಂತೆ ತಾನೂ ಕೂಡ ಸ್ವತಂತ್ರವಾಗಿ, ಸಂತೋಷದಿಂದ ನಲಿಯಬೇಕೆಂದು ಬಯಸಿ 'ಮೋಡ'ವನ್ನು ತನ್ನ 'ಅಣ್ಣ'ನಂತೆ ಎಂದು ಭಾವಿಸಿ 'ಮೋಡಣ್ಣ' ಎಂದು ಅತೀ ಆತ್ಮೀಯತೆಯಿಂದ ಕರೆಯುತ್ತದೆ.

ಬಾಲಕನ ಮಾತಿಗೆ ಮೋಡಣ್ಣನು ನಿನ್ನ ತಾಯಿ ಬೈಯುವಳು ಬರಬೇಡವೆಂದು ಉತ್ತರವನ್ನು ಕೊಡುತ್ತಾನೆ. ಆದರೂ ಸುಮ್ಮನಿರದ ಬಾಲಕ ಮೋಡದ ಬಗ್ಗೆ ಹೀಗೆಲ್ಲಾ ವಯಕ್ತಪಡಿಸುತ್ತಾನೆ:

"ಬಲು ಸಂತೋಷದಿ ತೇಲುವೆಯಣ್ಣ;
ಬಳಲದೆ ಆಟವನಾಡುವೆಯಣ್ಣ

---

೧. ದೇಜಗೌ., ಜಿ.ಎಸ್.ಶಿವರುದ್ರಪ್ಪ, ಪ್ರಧಾನ್ ಗುರುದತ್ತ, ಕುವೆಂಪು ಸಂಚಯ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೦೯, ಪು. ೩೬೭

ಮಿಂಚಿನ ಬಳಿಯೇ ನೀನಿರುವೆ;
ಮಿಂಚಿನ ಬಳೆಯನೆ ಧರಿಸಿರುವೆ;

ಗುಡುಗಿನ ಸಂಗಡ ಆಡುವೆ ನೀನು
ಗುಡುಗಾಟವ ಆಡುವವೊಲು ನಾನು
ದೂರದ ಗಿರಿಗಳ ಏರುವೆ ನೀನು;
ದೂರದ ಪುರಗಳ ನೋಡುವೆ ನೀನು;"[೧]

ಬಾಲಕನು ಸದಾ ಕಾಲ ಸಂತೋಷದಿಂದ ತೇಲುತ್ತ ಆಟವಾಡುವ ನೀನು ಮಿಂಚಿನ ಬಳಿಯಲ್ಲಿ ಗುಡುಗಿನ ಬಳಿಯಲ್ಲಿಯೇ ಇದ್ದು ಅದರ ಜೊತೆಯಲ್ಲೆಲ್ಲಾ ಆಟವಾಡುತ್ತೀಯ, ಅದಷ್ಟೇ ಅಲ್ಲದೆ ದೂರದಲ್ಲಿರುವ ಬೆಟ್ಟ-ಗುಡ್ಡಗಳನ್ನು, ಊರುಗಳನ್ನೆಲ್ಲಾ ನೋಡುವ ನೀನು ನನ್ನನ್ನು ಕೂಡ ನಿನ್ನ ಬಳಿ ಕರೆದುಕೊಂಡು ಹೋಗೆಂದು ಮೋಡವನ್ನು ಕೇಳಿಕೊಳ್ಳುತ್ತಿದೆ. ಆದರೆ, ಯಾವ ಮಾತಿಗೂ ಸಮ್ಮತಿಸದ ಮೋಡಣ್ಣ ಬರಬೇಡವೆಂದು ನಿರ್ದಾಕ್ಷಿಣ್ಯವಾಗಿ ಹೇಳಿಯೇ ಬಿಡುತ್ತದೆ.

ಎಷ್ಟೇ ಹೇಳಿದರೂ ಮೋಡಣ್ಣನ ಮಾತು ಕೇಳದ ಬಾಲಕನು ಪಕ್ಕದಲ್ಲಿಯೇ ಇದ್ದ ಗಿರಿಯಣ್ಣನ ಸಹಾಯವನ್ನು ಕೋರುತ್ತಾನೆ. ಗಿರಿಯಣ್ಣನು ಕೂಡ ಬಾಲಕನ ಆಸೆಯನ್ನು ನೆರವೇರಿಸಬೇಕೆಂದು ಮೋಡಣ್ಣನಿಗೆ ಹೇಳುತ್ತಾನೆ. ಆಗ ಮೋಡಣ್ಣ ಹೀಗೆ ಹೇಳುತ್ತಾನೆ.

"ಹತ್ತು ಕಡಲುಗಳ ಹೊತ್ತರು ನಾನು
ಎತ್ತೆನು ಬಾಲಕನೋರ್ವನ ಕೇಳು
ಸಿಡಿಲು ಮಿಂಚುಗಳನಾಳಲು ಬಲ್ಲೆ;
ಹುಡುಗರನಾಳುವುದಾದರೆ ಒಲ್ಲೆ;
ರೈತರ ಗುಂಪೇ ಬೈದರು ಸೈರಿಪೆ;
ತಾಯಿಯ ಶಾಪವ ಸೈರಿಸೆ ನಾನು!
ಎಲೆ ಗಿರಿಯಣ್ಣಾ, ಎಲೆ ಗಿರಿಯಣ್ಣಾ!"[೨]

ಈ ಮೇಲಿನಂತೆ ಹತ್ತು ಕಡಲುಗಳನ್ನು ಹೊತ್ತುಕೊಂಡರು. ಸಿಡಿಲು-ಮಿಂಚುಗಳನ್ನು ಕಂಡಿದ್ದರೂ ಕೂಡ ಆ ಬಾಲಕನನ್ನು ಕರೆದೊಯ್ಯುವುದಿಲ್ಲ. ಇಲ್ಲಿ ರೈತರ ಬೈಗುಳಕ್ಕಿಂತ ತಾಯಿಯ ಶಾಪವನ್ನು ಮಾತ್ರ ನಾನು ಸಹಿಸಲಾರೆನೆಂದು ಮೋಡಣ್ಣ ಹೇಳಿದಾಗ ಗಿರಿಯಣ್ಣ ಅವನ ಮಾತನ್ನು ಕೇಳಿ ಸುಮ್ಮನಾಗುತ್ತಾನೆ.

---

೧. ದೇಜಗೌ., ಜಿ.ಎಸ್.ಶಿವರುದ್ರಪ್ಪ, ಪ್ರಧಾನ್ ಗುರುದತ್ತ, ಕುವೆಂಪು ಸಂಚಯ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೦೯, ಪು. ೩೬೭.
೨. ಅದೇ., ಪು. ೩೬೯.

ಈ ಸಾಲುಗಳಲ್ಲಿ ಕವಿಯು ತಾಯಿ ಮತ್ತು ಮಗನ ಬಾಂಧವ್ಯವನ್ನು ಮೋಡಣ್ಣನು ಅರಿತಿರುವಂತೆ ಚಿತ್ರಿಸಿದ್ದಾರೆ. ಇಲ್ಲಿ ಪುಟ್ಟ ಬಾಲಕನು ಮೋಡವನ್ನು ಕಂಡು ತನಗೆ ಅರಿವಿಲ್ಲದಂತೆ 'ಮೋಡಣ್ಣ'ನೆಂದು ಕರೆದು ಮಾತನಾಡುವ ಪ್ರಸಂಗವಂತೂ ತುಂಬಾ ಸೊಗಸಾಗಿ ಮೂಡಿಬಂದಿದೆ.

ಗಿರಿಯಣ್ಣನ ಮಾತನ್ನು ಕೇಳದೆ ಇದ್ದಾಗ ಬಾಲಕ ಮತ್ತೊಂದು ಪ್ರಯತ್ನವನ್ನುಪಡುತ್ತಾನೆ. ಗಿರಿಯಣ್ಣನ ಹಾಗೆ ಪಕ್ಕದಲ್ಲೇ ಇದ್ದ ಕಾಡಣ್ಣನನ್ನು ಸಹಾಯ ಮಾಡಲೆಂದು ಬೇಡಿಕೊಳ್ಳುತ್ತಾನೆ. ಆದರೆ, ಗಿರಿಯಣ್ಣನ ಹಾಗೆ ಸಹಾಯ ಮಾಡಲು ಒಪ್ಪದೆ ಕಾಡಣ್ಣ ಅಸಮಾಧಾನವನ್ನು ವ್ಯಕ್ತಪಡಿಸುತ್ತಾನೆ.

(ಕಾಡು)

"ಬಿಡೊ ಬಿಡೊ ನಿನ್ನೀ ನುಣ್ಣನೆ ನುಡಿಗಳ;
ಕಡಿ ಕಡಿ ಎನ್ನುವೆ ತಂದೆಗೆ ಬುಡಗಳ!
ಬೆಂಕಿಯ ಬುಡಗಳಿಗಿಡಿಸುವನು,
ಧಗ ಧಗ ಉರಿಸುವನು!

ಕಡಿವರೆ ಹೊರತೂ ಬಂದವರೆಲ್ಲಾ
ನೆಡುವರನೊಬ್ಬರ ಕಾಣಲೆ ಇಲ್ಲಾ
ಇದ್ದಿಲ ನೆವದಿಂ ಕಡಿವರು ಕೆಲರು.
ಗೆದ್ದಲಿಗೆನ್ನನು ಕೊಡುವರು ಕೆಲರು!
ಕದ್ದೇ ಸಾಗಿಪರೆನ್ನನು ಕೆಲರು
ಸುದ್ದಿಯೆ ಇಲ್ಲದೆ ಕೊಲ್ಲುತಲಿಹರು!"[೧]

ಈ ರೀತಿಯಾಗಿ ಕಾಡುಗಳನ್ನು ಕಡಿದು ಎಲ್ಲಾ ಕಡೆ ನಾಶಮಾಡುತ್ತಿರುವ ಮನುಷ್ಯರು ಗಿಡ-ಮರಗಳ ಬಗ್ಗೆ ತೋರಿಸುವ ನಿರ್ಲಕ್ಷ್ಯದಿಂದ ಹಸಿರುತನವಿಲ್ಲದೆ ಬಯಲಾಗಿರುವುದನ್ನು ಕಂಡು ಕಾಡಣ್ಣ ಗೋಳಿಡುತ್ತಿದ್ದಾನೆ. ಮನುಷ್ಯನು ಕಾಡನ್ನು ನಾಶಮಾಡುವುನೊ ಹೊರತು ಒಂದು ಗಿಡವನ್ನು ನೆಡಲು ಮುಂದೆ ಬರುವುದಿಲ್ಲ. ಅದರಲ್ಲಿರುವ ಆಸಕ್ತಿ ಇದರಲ್ಲಿ ಇಲ್ಲದಾಗಿದ್ದು ತುಂಬಾ ಕಟುಕತನದಿಂದ ನಡೆದುಕೊಳ್ಳುತ್ತಿದ್ದಾರೆ ಎಂದು ಮೋಡಣ್ಣನಿಗೆ ಈ ಮೂಲಕ ತನ್ನ ದುಃಖವನ್ನು ವ್ಯಕ್ತಪಡಿಸುತ್ತಿದೆ.

---

೧. ದೇಜಗೌ., ಜಿ.ಎಸ್.ಶಿವರುದ್ರಪ್ಪ, ಪ್ರಧಾನ್ ಗುರುದತ್ತ, ಕುವೆಂಪು ಸಂಚಯ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೦೯, ಪು. ೩೭೦-೭೧.

ಇಲ್ಲಿ ಕವಿಯು ಮಕ್ಕಳಿಗೆ ಮೋಡಕ್ಕು-ಕಾಡಿಗೂ –ಗಿರಿಗೂ ಇರುವ ಸಂಬಂಧವನ್ನು ಪರಿಚಯಿಸುವುದರ ಮೂಲಕ ಬೆಳೆಯುತ್ತಿರುವ ಮಕ್ಕಳಲ್ಲಿ ಪರಿಸರವನ್ನು ಸಂರಕ್ಷಿಸುವುದರ ಬಗ್ಗೆ ಅರಿವು ಮೂಡಿಸುತ್ತಿದ್ದಾರೆ. ಕಾಡನ್ನು ನಾಶಮಾಡುವುದರಿಂದ ಆಗುವಂತಹ ಅನಾಹುತಗಳನ್ನು ತಿಳಿಸುತ್ತಾ 'ಕಾಡನ್ನು ಉಳಿಸಿ ನಾಡನ್ನು ಬೆಳೆಸಿ' ಎಂಬ ಸಂದೇಶದ ಮೂಲಕ ಪರಿಸರದ ಬಗ್ಗೆ ಜಾಗೃತಿ ಮೂಡಿಸುತ್ತಿದ್ದಾರೆ. ಒಟ್ಟಾರೆಯಾಗಿ ಇದೊಂದು 'ಪ್ರಕೃತಿ' ಪ್ರಧಾನವಾದ ನಾಟಕವಾಗಿ ಮೂಡಿಬಂದಿದೆ.

'ನನ್ನ ಮನೆ, ಮರಿವಿಜ್ಞಾನಿ, ಮೇಘಪುರ' ಎಂಬ ಕವನಗಳನ್ನು ಒಳಗೊಂಡಂತೆ 'ಶಿಶುಗೀತಾಂಜಲಿ' ಎಂಬ ಹೆಸರಿನಲ್ಲಿ ಕುವೆಂಪುರವರು ಮಕ್ಕಳಿಗೆ ಸೀಮಿತವಾಗಿರುವ ಕವನಗಳನ್ನು ಇದರಲ್ಲಿ ರಚಿಸಿದ್ದಾರೆ. ಅಂತಹ ಕೆಲವು ಕವನಗಳಲ್ಲಿ ನಿಸರ್ಗ ಪ್ರೀತಿಯನ್ನು ಪ್ರತಿಬಿಂಬಿಸುವ ಕವನಗಳನ್ನು ಕೂಡ ಇಲ್ಲಿ ಕಾಣಬಹುದಾಗಿದೆ.

"ದೇವರ ಪೆಪ್ಪರಮೆಂಟೇನಮ್ಮಾ
ಗಗನದೊಳಲೆಯುವ ಚಂದಿರನು?
ಎಷ್ಟೇ ತಿಂದರು ಖರ್ಚೇ ಆಗದ
ಬೆಳೆಯುವ ಪೆಪ್ಪರಮೆಂಟಮ್ಮಾ!"[೧]

ಇಲ್ಲಿ ಕವಿಯು ಚಂದಿರನನ್ನು ಒಂದು ಸಿಹಿಯಾದ ಪದಾರ್ಥವಾಗಿರುವ ಪೆಪ್ಪರಮೆಂಟಿಗೆ ಹೋಲಿಸಿರುವುದು ಅತ್ಯಂತ ಸೊಗಸಾಗಿದೆ. ಏಕೆಂದರೆ ಚಂದಿರನ ಬಗ್ಗೆ ತಿಳಿಯದಿರುವ ಮಗು ಅದನ್ನು ಪೆಪ್ಪರಮೆಂಟಿಗೆ ಹೋಲಿಕೆ ಮಾಡಿದೆ. ಇಂತಹ ಕಲ್ಪನೆಗಳ ಮೂಲಕ ಕವಿಯು ಮಕ್ಕಳಿಗೆ ಗಗನ, ಮೋಡ, ಸೂರ್ಯ, ಚಂದ್ರರನ್ನು ಪರಿಚಯಿಸುವಲ್ಲಿ ಯಶಸ್ವಿಯಾಗಿದ್ದಾರೆ.

"ಕೆಲರು ಹಳದಿಯಲಿ, ಕೆಲರು ನೀಲಿಯಲಿ,
ಕೆಲರು ಮಿಂದಿಹರು ಕಂಪಿನಲಿ!
ಎಲ್ಲ ಕನ್ನೆಯರ ಗಲ್ಲ ಕೆನ್ನೆಯಲಿ
ನಲ್ಲ ಮುತ್ತಿಹವು ಪೆಂಪಿನಲಿ!
ತಾಯಿಯಕ್ಕರೆಯು ಬಿಗಿದ ತಕ್ಕೆಯನು
ತಬ್ಬಿಕೊಂಡು ಬಂದಿರುವರಮ್ಮಾ!
ಸವಿಯ ಸೆರೆಗೆ ಬದಲಾಗಿ ಮುಕ್ತಿಯನು

---

೧. ದೇಜಗೌ., ಜಿ.ಎಸ್.ಶಿವರುದ್ರಪ್ಪ, ಪ್ರಧಾನ್ ಗುರುದತ್ತ, ಕುವೆಂಪು ಸಂಚಯ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೦೯, ಪು. ೩೬೧.

ಬಪ್ಪಿ ಅಪ್ಪಿ ತಂದಿರುವರಮ್ಮಾ!
ಗಿಡದ ಹೂವಾಗುವೆನು ನಾನಮ್ಮಾ!
ನನ್ನ ಬಿಡು ಬೇಗನಮ್ಮಾ!"[೧]

ಪ್ರಕೃತಿ ಸೌಂದರ್ಯದ ಪ್ರತೀಕವಾಗಿರುವ ಹೂವನ್ನು, ಅದರ ಸೊಬಗನ್ನು ಈ ಕವನದ ಮೂಲಕ ಚಿತ್ರಿಸಿದ್ದಾರೆ. ಮಗುವು ತನ್ನ ಮನೆಯ ಹೂದೋಟವನ್ನು ನೋಡುತ್ತಾ ಹೂವುಗಳೆಲ್ಲ ಬಣ್ಣ-ಬಣ್ಣದಿಂದ ಸಿಂಗಾರಗೊಂಡು, ಮುಗುಳು ನಗೆಯನ್ನು ಬೀರುತ್ತ ನಲಿದಾಡುತ್ತಿದ್ದಾರೆ. ಸನ್ನೆಯ ಮೂಲಕ ನನ್ನನ್ನು ಕೂಡ ಕರೆಯುವರಮ್ಮ ಎಂದು ತನ್ನ ತಾಯಿಯ ಬಳಿ ಹೇಳುತ್ತಿದೆ. ಹಾಗೆಯೇ ಹೂಗಳೆಲ್ಲ ಹಳದಿ, ನೀಲಿ, ಕೆಂಪಿನ ಬಣ್ಣದಿಂದ ಕಂಗೊಳಿಸುತ್ತಿರುವ ಅವರಲ್ಲಿ ನಾನು ಕೂಡ ಒಬ್ಬನಾಗುವನೆಂದು ಹೇಳುತ್ತಿರುವ ಮಗು ಹೂವಿನಿಂದ ಆಕರ್ಷಿತಗೊಂಡಿದೆ. ಇಲ್ಲಿ ಕವಿಯು ಕೂಡ ಒಂದು ಮಗುವಾಗಿ ಹೂವಿನ ಸೌಂದರ್ಯಕ್ಕೆ ಆಕರ್ಷಿತರಾಗಿ ಒಂದು ಮಗುವಿನ ಮೂಲಕ ಅದರ ಸೊಬಗನ್ನು, ಅಂದವನ್ನು ಹಾಡಿ ಹೊಗಳಿಸಿದ್ದಾರೆ ಎಂಬುದು ಇಲ್ಲಿ ಕಂಡುಬರುತ್ತದೆ.

ಇದೇ ರೀತಿಯಾಗಿ 'ಮಲ್ಲಿಗೆ ಹೂಗಳು, ಹೂವಿನ ಬೇಲಿ' ಕವನಗಳಲ್ಲೂ ಹೂವಿನ ಸೌಂದರ್ಯವನ್ನು ಸವಿಯಬಹುದಾಗಿದೆ.

"ತೋಟದ ಬೇಲಿಯು ಹೂಮಯವಾಗಿದೆ
ಬಾರವ್ವ, ತಂಗಿಯೆ, ಹೂ ಕೊಯ್ಯಲು!
ಹೂವಿನ ಮಧುವನು ಹೀರಲು ಬಂದಿವೆ
ಬಗೆ ಬಗೆ ಬಣ್ಣದ ಹಕ್ಕಿಗಳು!"[೨]

ಈ ಕವಿತೆಯಲ್ಲಿ ಒಬ್ಬ ಬಾಲಕ ತಮ್ಮ ತೋಟವೆಲ್ಲಾ ಹೂವಿಂದ ಕಂಗೊಳಿಸುತ್ತಿರುವುದನ್ನು ಕಂಡು ಆ ಹೂವನ್ನು ಕೊಯ್ಯಲು ತನ್ನ ತಂಗಿಯನ್ನು ಕರೆಯುತ್ತಿರುವಂತೆ ಕವಿ ಈ ಕವನವನ್ನು ರಚಿಸಿದ್ದಾರೆ. ಇದರ ಜೊತೆಯಲ್ಲೇ ಹೂವಿಗೂ-ಹಕ್ಕಿಗಳಿಗಿರುವ ಸಂಬಂಧವನ್ನು ಮಕ್ಕಳಿಗೆ ಈ ಮೂಲಕ ಪರಿಚಯಿಸುತ್ತಿದ್ದಾರೆ. ಇದರಿಂದ ಏನೂ ಅರಿಯದ ಮಕ್ಕಳು ಗದ್ದೆ-ತೋಟ, ಹಣ್ಣು-ಹೂವು, ಪ್ರಾಣಿ-ಪಕ್ಷಿಗಳನ್ನು ತಿಳಿದುಕೊಳ್ಳುವ ಇಂತಹ ಕವನಗಳು ಸಹಕಾರಿಯಾಗಿವೆ.

---

೧. ಕುವೆಂಪು, ಮರಿವಿಜ್ಞಾನಿ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೪, ಪು. ೭
೨. ಅದೇ., ಪು. ೧೪

ಮೇಲೆ ತಿಳಿಸಿದಂತೆ ಕವಿ 'ಹಕ್ಕಿಗಳು' ಎಂಬ ಕವಿತೆಯಲ್ಲಿ ಪಕ್ಷಿಗಳು ದಿನನಿತ್ಯ ಯಾವ ರೀತಿ ಹಾರಾಡುತ್ತದೆ, ಬೇಟೆಗಾರರಿಂದ ಆಗುವಂತಹ ಅಪಾಯಗಳ ಬಗ್ಗೆ ತಿಳಿಸುತ್ತಾ ಹಕ್ಕಿಗಳ ಬಗ್ಗೆ ತುಂಬಾ ಕಾಳಜಿ ವಹಿಸಿ ಯಾವ ರೀತಿ ಎಚ್ಚರಿಕೆಯಿಂದ ಇರಬೇಕು ಎಂಬುದನ್ನು ಕುವೆಂಪು ಈ ಕವನದಲ್ಲಿ ತಿಳಿಸಿದ್ದಾರೆ.

"ಹಕ್ಕಿಗಳೆ ಕಾಡಿನೊಳಗಲೆದಾಡಿ ಹೋಗಿ,
ಪಕ್ಕಗಳ ಬಡಿಬಡಿದು ಬೇಸರವ ನೀಗಿ;
ತಳಿರಿಂದ ತಳಿರೆಡೆಗೆ ಹಾಡಿ ಹಾರಾಡಿ
ಬಳಲಿ ಬಹ ಜನಪದಕೆ ಸಂತಸವ ನೀಡಿ"[೧]

ರೀತಿ ಪಕ್ಷಿಗಳು ತನ್ನ ರೆಕ್ಕೆಯ ಮೂಲಕ ಕಾಡಿನಲ್ಲಿರುವ ಮರಗಳನ್ನು ಒಂದರಿಂದ ಒಂದಕ್ಕೆ ಹಾರಾಡುತ್ತಾ ತನ್ನ ಇಂಪಾದ ಧ್ವನಿಯಿಂದ ಎಲ್ಲರನ್ನು ರಂಜಿಸುತ್ತಾ ಸಂತಸವನ್ನು ನೀಡುತ್ತದೆ. ಹಾಗಾಗಿ, ಈ ಹಕ್ಕಿಗಳಂತೆಯೇ ಮಕ್ಕಳು ಕೂಡ ಸ್ವತಂತ್ರವಾಗಿ ಹಾರಾಡಬೇಕೆಂಬ ಬಯಕೆಯನ್ನು ಹುಟ್ಟಿಸುವಂತೆ ಕವಿ ಈ ಕವಿತೆಯನ್ನು ಚಿತ್ರಿಸಿದಂತಿದೆ.

'ಮೇಘಪುರ' ಎಂಬ ಕವನದಲ್ಲೂ ಕೂಡ 'ಮೋಡಣ್ಣನ ತಮ್ಮ' ಎಂಬ ನಾಟಕದಲ್ಲಿ ಇರುವ ಹಾಗೆಯೇ ಈ ಕವನದಲ್ಲಿಯೂ ಒಬ್ಬ ಪುಟ್ಟ ಬಾಲಕನು ತನ್ನ ತಾಯಿಯ ಬಳಿ ಹೀಗೆ ಕೇಳುತ್ತಾನೆ:

"ಮೇಘಪುರದೊಳಗಿರುವರಾರಮ್ಮಾ!
ಹೋಗಿ ಬರುವೆನು ನಾನೆನ್ನ ಕಳುಹಿಸಮ್ಮಾ!

ಮುಗಿಲ ಬಾಲಕನಾಗಿ
ಹಗಲೆಲ್ಲ ಅಲೆಯುವೆನು
ನಗ ಶೃಂಗಗಳ ಚರಿಸಿ
ನಗೆದಾಡಿ ಸಂಜೆಯೊಳು

ಮಗುವಾಗಿ ಬರುವೆ

ಮೇಘಪುರವದು ನಮ್ಮ ಊರಮ್ಮಾ;
ಆಗಸದ ಮಕ್ಕಳಾನಂದಹೃದಯರಮ್ಮಾ!"[೨]

---

೧. ಕುವೆಂಪು, ಮೇಘಪುರ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೪೨, ಪು. ೯.
೨. ಕುವೆಂಪು, ಮೇಘಪುರ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೪೨, ಪು. ೧೫, ೧೮-೧೯.

ಈ ಮೇಲಿನ ಕವಿತೆಯಲ್ಲಿ ಪುಟ್ಟಬಾಲಕನು ತಾನೂ ಮುಗಿಲ ಬಾಲಕನಾಗಬೇಕೆಂದು ತನ್ನ ಆಸೆಯನ್ನು ವ್ಯಕ್ತಪಡಸಿದ್ದಾನೆ. ಮೇಘವನ್ನೇ ಒಂದು ಊರನ್ನಾಗಿ ಭಾವಿಸಿದ ಮಗುವು ಅದೇ ತನ್ನ ಊರೆಂದು ಹೇಳುತ್ತಿರುವಂತೆ ಕವಿಯು ಈ ಕವನವನ್ನು ರಚಿಸಿದ್ದಾರೆ.

ಇದೇ ರಿತಿ ಇನ್ನೂ ಅನೇಕ ಕವನಗಳಲ್ಲಿ ಪ್ರಕೃತಿಗೆ ಸಂಬಂಧಿಸಿದ ಕವಿತೆಗಳನ್ನು ಕುವೆಂಪುರವರ 'ಶಿಶುಗೀತಾಂಜಲಿ' ಕೃತಿಯಲ್ಲಿ ಕಾಣಬಹುದಾಗಿದೆ.

'ಮೇಘಪುರ' ಕವನಗಳಲ್ಲಿ ಬರುವ 'ತೊರೆಯ ಬಳಿ, ಎಳ ಬಿಸಿಲು, ಏಕೆ? – ಹೊಂಬಿಸಿಲು! ಕವನಗಳನ್ನು, 'ನನ್ನ ಮನೆ' – ಕವನಗಳಲ್ಲಿ 'ಮೂರ್ತಿಯ ಬೆಳ್ಮುಗಿಲು', ಕಡಲಿನ ರಾಶಿ, ಗಗನದ ಯಾತ್ರಿಕರು, ತಿಂಗಳ್‌ಮಾವ' ಕವನಗಳನ್ನು ಹಾಗೂ 'ಮರಿವಿಜ್ಞಾನಿ' ಕವನಗಳಲ್ಲಿ 'ಹೂವಿನ ಬೇಲಿ, ಹೂವುಗಳು, ಮಲ್ಲಿಗೆ ಹೂವುಗಳನ್ನು' ಎಂಬ ಕವನಗಳನ್ನು ಪರಿಚಯಿಸಲಾಗಿದೆ.

ಹೀಗೆ ಕುವೆಂಪುರವರು ನಿಸರ್ಗದ ಮಗುವಾಗಿ ಇಂತಹ ಕವನಗಳನ್ನು, ನಾಟಕ, ಕಥೆಗಳನ್ನು ಪರಿಚಯಿಸುವುದರ ಮೂಲಕವೇ ಮಕ್ಕಳಲ್ಲಿ ಪರಿಸರದ ಮೇಲೆ ಕಾಳಜಿ, ಪ್ರೀತಿ ಹುಟ್ಟಿಸುವಂತೆ ಪ್ರಯತ್ನವನ್ನು ಪಟ್ಟಿದ್ದಾರೆ. ಈ ರೀತಿ ತಮ್ಮ ಕೈ ಚಳಕದ ಮೂಲಕ ಮಕ್ಕಳನ್ನು ಆಕರ್ಷಿಸುವಲ್ಲಿ ಕವಿ ಕುವೆಂಪು ಯಶಸ್ವಿಯಾಗಿರುವುದನ್ನು ನಾವು ಪ್ರಶಂಸಿಸಲೇಬೇಕು.

# ಅಧ್ಯಾಯ ಐದು

# ಭಾಷೆ

ಮೊದಲಿಗೆ ಭಾಷೆ ಎಂದರೇನು? ಎಂಬುದರ ಬಗ್ಗೆ ತಿಳಿದುಕೊಳ್ಳುವುದಾದರೆ ಭಾಷೆ ಒಂದು ಮಾಧ್ಯಮ. ಮಾನವ ತನ್ನ ದೈನಂದಿನ ಬದುಕಿಗೆ ಸೃಷ್ಟಿಸಿಕೊಂಡಿರುವ ಸಂಪರ್ಕ ಸಾಧನವಾಗಿದೆ ಎಂದು ಹೇಳಲಾಗಿದೆ.

**ಕುವೆಂಪು ಪ್ರಕಾರ:** 'ಭಾಷೆ ಒಂದು ಲೋಕೋಪಯೋಗಿ ಮತ್ತು ಭಾವೋಪಯೋಗಿ' ಎಂಬ ಮಾತು ಮಹತ್ವದ್ದು. ಭಾಷೆ ಇಲ್ಲದೆ ಯಾವ ಲೋಕ ಕಾರ್ಯಗಳು ನಡೆಯಲು ಸಾಧ್ಯವಿಲ್ಲ' ಎಂದು ಅಭಿಪ್ರಾಯಪಟ್ಟಿದ್ದಾರೆ.

ಮಾನವ ಸಂಘಜೀವಿ. ಒಂಟಿಯಾಗಿ ಬಾಳಲು ಮಾನವರಿಗೆ ಸಾಧ್ಯವಾಗುವುದಿಲ್ಲ. ಸಂಘಜೀವನದಿಂದ ಸಮಾಜ ಹುಟ್ಟಿತು. ಅದೇ ರೀತಿ ಸಮಾಜದಿಂದ ಭಾಷೆಯು ಉಗಮವಾಯಿತು. ಹೀಗೆ ಹುಟ್ಟಿದ ಭಾಷೆಯಿಂದ ಅನೇಕ ಪ್ರಯೋಜನಗಳಾಗಿರುವುದರ ಜೊತೆಯಲ್ಲೇ ಕನ್ನಡ ಭಾಷೆಗೆ ಧಕ್ಕೆಯು ಕೂಡ ಉಂಟಾಗಿದೆ. ಏಕೆಂದರೆ, ಕನ್ನಡಿಗರೇ ಕನ್ನಡವನ್ನು ಮಾತನಾಡಲು ಹಿಂಜರಿಯುತ್ತಿದ್ದಾರೆ. ಆದರೆ ಬೇರೆ ಭಾಷೆ ಮಾತನಾಡಿದರೆ ಅದನ್ನೇ ಪ್ರತಿಷ್ಠೆ ಎಂದು ಭಾವಿಸುತ್ತಾರೆ. ಈ ರೀತಿ ಕರ್ನಾಟಕದಲ್ಲಿ ಕನ್ನಡಕ್ಕೆ ಬೆಲೆಯೇ ಇಲ್ಲದಂತಾಗಿದೆ. ಕನ್ನಡಕ್ಕೆ ಅಂದರೆ, ಕನ್ನಡ ಭಾಷೆಗೆ ಯಾವ ಭಾಷೆಯಲ್ಲೂ ಇಲ್ಲದ ಅತ್ಯಮೂಲ್ಯವಾದ ಸಾಹಿತ್ಯ ಪರಂಪರೆ ಇದೆ. ಇಂತಹ ಕನ್ನಡ ಸಾಹಿತ್ಯಕ್ಕೆ, ಕನ್ನಡಿಗರಿಗೆ ಅನ್ಯಜನರು ತೊಂದರೆ ಕೊಡುವುದನ್ನು ಹೆಚ್ಚಿಸುತ್ತಲೇ ಇದ್ದಾರೆ. ಇದಕ್ಕೆ ಕಾರಣ ಕನ್ನಡಿಗರಲ್ಲಿರುವ ವಿಶಾಲವಾದ ಹೃದಯ. ಸೂಕ್ಷ್ಮತನ ಹಾಗೂ ಎಲ್ಲರೂ ನಮ್ಮವರೇ ಒಂದೇ ಎಂಬ ಭಾವನೆಯೇ ಕನ್ನಡಿಗರ ಮೇಲಿನ ದಬ್ಬಾಳಿಕೆಗೆ ಕಾರಣವಾಗಿದೆ.

ಈಗಷ್ಟೇ ಅಲ್ಲದೆ ಪ್ರಾಚೀನ ಕಾಲದಿಂದಲೂ ಕನ್ನಡ ಭಾಷೆಗೆ ಕನ್ನಡ ಸಾಹಿತ್ಯಕ್ಕೆ ಹಲವಾರು ಜನರು, ಕವಿಗಳು, ವಿದ್ವಾಂಸರು, ಪಂಡಿತರು ದುಡಿದಿದ್ದಾರೆ.

ಛಿದ್ರವಾಗಿದ್ದಂತಹ ಕರ್ನಾಟಕವನ್ನು, ಕನ್ನಡದ ಜನತೆಯನ್ನು ಒಂದುಗೂಡಿಸಲು ನವೋದಯ ಕಾಲದ ಕವಿಗಳು, ಸಾಹಿತಿಗಳು, ಸಾಮಾನ್ಯ ಜನರು ಕೂಡ ತುಂಬಾ ಶ್ರಮಪಟ್ಟಿದ್ದಾರೆ. ಕನ್ನಡ ಭಾಷೆಯ ಬಗ್ಗೆಯೇ ಹಲವಾರು ಪ್ರತಿಭಟನೆಗಳು ನಡೆದಿವೆ. ಕನ್ನಡ ಭಾಷೆಯ ಉಳಿವಿಗಾಗಿ ನಡೆದಂತಹ 'ಗೋಕಾಕ್ ಚಳುವಳಿ'ಯಲ್ಲಿ ಇಡೀ ಕರ್ನಾಟಕ ಜನತೆ ಭಾಗವಹಿಸಿ ಯಶಸ್ವಿಗೊಳಿಸಿದ್ದಾರೆ.

ಏಕೆಂದರೆ, ಕನ್ನಡದಂತಹ ಆಡು-ನುಡಿಗಳನ್ನು ಮಕ್ಕಳು ಹುಟ್ಟಿದ ಕ್ಷಣದಿಂದಲೇ ಯಾವ ಪ್ರಯತ್ನವಿಲ್ಲದೆ ಆ ಭಾಷೆಯಲ್ಲಿ ವ್ಯವಹರಿಸುವ ಶಕ್ತಿಯನ್ನು ಗಳಿಸಿಕೊಳ್ಳುತ್ತಾ ಹೋಗುತ್ತಾರೆ. ಇದನ್ನೇ ಪ್ರಥಮ ಭಾಷೆ ಎನ್ನುವುದು. ಇಂತಹ ಭಾಷೆಯ ಸಾಹಿತ್ಯ, ಸಮಾಜದ ಜೊತೆ ನಿಕಟವಾದ ಸಂಬಂಧವನ್ನು ಬೆಳೆಸಿಕೊಂಡೇ ಬಂದಿದೆ ಎಂದು ಹೇಳಬಹುದು.

ಇತ್ತೀಚಿನ ದಿನಗಳಲ್ಲಿ ಕನ್ನಡ ಭಾಷೆ-ಸಂಸ್ಕೃತಿಗಳ ಬಗೆಗೆ ನಮ್ಮ ಕನ್ನಡಿಗರು ಪ್ರೀತಿ-ಶ್ರದ್ಧೆಗಳನ್ನು ತೋರುತ್ತಿಲ್ಲ. ಇದು ದಿನೇ ದಿನೇ ಹೆಚ್ಚಾಗುತ್ತಿದೆ. ಇಂಗ್ಲಿಷ್ ಭಾಷೆಯ ವ್ಯಾಮೋಹದಿಂದ ನಮ್ಮ ನಾಡಿನಲ್ಲಿ ಮಾತ್ರವಲ್ಲದೆ ಇಡೀ ಭಾರತದಲ್ಲೆಲ್ಲ ಕನ್ನಡ ಭಾಷೆಯನ್ನು ಕಡೆಗಣಿಸಲಾಗುತ್ತಿದೆ. ಇದು ಕನ್ನಡ ಭಾಷೆಯ ವಿಕಾಸಕ್ಕೆ ಮಾರಕವಾಗಿದೆ. ಹಾಗೆಂದ ಮಾತ್ರಕ್ಕೆ ಇತರ ಭಾಷೆಗಳನ್ನು ಕಡೆಗಣಿಸುವುದಾಗಿ, ವಿರೋಧವನ್ನಾಗಲಿ ವ್ಯಕ್ತಪಡಿಸುತ್ತಿಲ್ಲ. ಆದರೆ ಅನಿವಾರ್ಯ ಇರುವ ಸಂದರ್ಭಗಳಲ್ಲಿ ಪ್ರತಿಯೊಬ್ಬರಿಗೂ ಬೇರೆ ಬೇರೆ ಭಾಷೆಗಳ ಪ್ರಯೋಜನವನ್ನು ಪಡೆಯಬೇಕಾಗುತ್ತದೆ. ಅದಕ್ಕೋಸ್ಕರ ನಮ್ಮ ಮಾತೃಭಾಷೆಗೆ ಧಕ್ಕೆ ತರುವ ರೀತಿಯಲ್ಲಿ ಅನ್ಯಭಾಷೆಯನ್ನು ಬಳಸುವುದು ತಪ್ಪಾಗುತ್ತದೆ.

ನಾವಿರುವ ಈಗಿನ ಸಂದರ್ಭವನ್ನು ಪರಿಶೀಲಿಸಿ ನೋಡುವುದಾದರೆ, ನಗರ ಪ್ರದೇಶಗಳಲ್ಲಿ ಇಂಗ್ಲಿಷ್ ಭಾಷೆಯು ಅತೀ ವೇಗವಾಗಿ ಮುನ್ನುಗ್ಗುತ್ತಿದೆ. ಅದೇ ರೀತಿ ಈ ಭಾಷೆಗೆ ಪ್ರಾಮುಖ್ಯತೆಯನ್ನು ಕೊಡಲಾಗುತ್ತಿದೆ. ಈ ಭಾಷೆಯನ್ನು ಬಳಸುವುದರ ಮೂಲಕ ಶ್ರೀಮಂತರು ತಮ್ಮ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುತ್ತಾರೆ. ಆದರೆ, ಇದೇ ರೀತಿ ಕನ್ನಡ ಭಾಷೆಯನ್ನು ಮಾತನಾಡಿದರೆ ಅವಮಾನವೆಂದು ತಿಳಿದುಕೊಳ್ಳುವ ಪರಿಸ್ಥಿತಿಯೇ ಹೆಚ್ಚಾಗುತ್ತಿದೆ. ಇಂತಹ ಸಮಸ್ಯೆಯನ್ನು ಶಿಕ್ಷಣ ಕ್ರಮದಲ್ಲೂ ನೋಡಬಹುದಾಗಿದೆ. ಇಂಗ್ಲಿಷ್ ವ್ಯಾಮೋಹಕ್ಕೆ ಒಳಗಾಗಿರುವ ಪೋಷಕರು ತಮ್ಮ ಮಕ್ಕಳನ್ನು ಇಂಗ್ಲಿಷ್ ಮಾಧ್ಯಮಕ್ಕೆ ಓದಲು ಕಳುಹಿಸುತ್ತಾರೆ. ಇದರಿಂದಾಗಿ ಕನ್ನಡ ಮಾಧ್ಯಮದ ಮಕ್ಕಳು ಕೀಳರಿಮೆಗೆ ಒಳಪಡುತ್ತಿದ್ದಾರೆ ಎಂಬುದು ಈಗಿನ ಸಂದರ್ಭದ ಪರಿಶೀಲನೆಯಾಗಿದೆ.

ಏಕೆಂದರೆ ಈ ದಿನಗಳಲ್ಲಿ ಸಾಮಾನ್ಯ ಇಂಗ್ಲಿಷ್ ತಿಳುವಳಿಕೆಯಿಲ್ಲದೆ ಉದ್ಯೋಗಗಳನ್ನು ಪಡೆದುಕೊಳ್ಳುವುದು ಅಷ್ಟು ಸುಲಭದ ಮಾತಲ್ಲ. ನಗರ ಪ್ರದೇಶಗಳಲ್ಲಿ ಇಂಗ್ಲಿಷ್ ಅತೀ ಅವಶ್ಯಕವಾಗಿಬಿಟ್ಟಿದೆ. ಆದ್ದರಿಂದ ಕನ್ನಡ ಭಾಷೆಯನ್ನು ಮರೆತು ಇತರ ಭಾಷೆಗಳಿಗೆ ಪ್ರೋತ್ಸಾಹಿಸುತ್ತಿದ್ದಾರೆ. ಇದೇ ರೀತಿ ಪ್ರೋತ್ಸಾಹವು ಕನ್ನಡ ಭಾಷೆಗೂ ಲಭಿಸಬೇಕೆಂಬುದು ನಮ್ಮಂತಹ ಕನ್ನಡಾಭಿಮಾನಿಗಳ ಆಶಯವಾಗಿದೆ.

ಈ ಮೇಲಿನ ಅನಿಸಿಕೆಯಂತೆ ನವೋದಯ ಕವಿಯಾದಂತಹ ಕುವೆಂಪು ಅವರು ತಮ್ಮ ನಿಜಜೀವನದಲ್ಲಿ ಕನ್ನಡದ ವಿಷಯವಾಗಿ ಮಗ 'ತೇಜಸ್ವಿ'ಗೆ ಹೇಳಿದ ಮಾತುಗಳು ಅವರೊಡನೆ ಮಾಡಿದ ಚರ್ಚೆಗಳು ಪ್ರತಿಯೊಬ್ಬ ಕನ್ನಡಿಗನಿಗೂ, ಪ್ರತಿಯೊಬ್ಬ ಕನ್ನಡ ಶಿಕ್ಷಕರಿಗೂ ತಿಳಿದುಕೊಳ್ಳಲೇಬೇಕಾದ ಅಂಶವಾಗಿದೆ.

ಕವಿ ಕುವೆಂಪು ಬದುಕಿದ್ದು ಕನ್ನಡ, ಉಸಿರಾಡಿದ್ದು ಕನ್ನಡ, ಆ ಉಸಿರನ್ನು ಅಮರವಾಗಿಸಿದ್ದು ಕನ್ನಡದಲ್ಲೇ, ಅದಕ್ಕಾಗಿ ಅವರಾಡಿದ್ದು;

"ಎಲ್ಲಾದರೂ ಇರು; ಎಂತಾದರೂ ಇರು;
ಎಂದೆಂದಿಗೂ ನೀ ಕನ್ನಡವಾಗಿರು
ಕನ್ನಡ ಗೋವಿನ ಓ ಮುದ್ದಿನ ಕರು
ಕನ್ನಡತನವೊಂದಿದ್ದರೆ ನೀನಮ್ಮಗೆ ಕಲ್ಪತರು!"[೧]

ಕುವೆಂಪು ಅವರು ಕನ್ನಡ ಸಾಹಿತ್ಯ ರಾಶಿಗೆ ಅಪಾರ ಕೊಡುಗೆ ನೀಡಲು ಪ್ರೇರೇಪಿಸಿದಂತಹ ಆಂಗ್ಲಕವಿ 'ಜೇಮ್ಸ್ ಕಸಿನ್ಸ್' ಅವರನ್ನು ಕನ್ನಡ ಜನತೆ ವಂದಿಸಲೇ ಬೇಕು ಅಲ್ಲವೆ ಏಕೆಂದರೆ, ಕುವೆಂಪು ಮೊದಲು ಬರೆದದ್ದು ಆಂಗ್ಲ ಭಾಷೆಯಲ್ಲಿಯೇ.

ಕುವೆಂಪು ೨೦ನೇ ಶತಮಾನದ ಅತಿ ಶ್ರೇಷ್ಠ ಕವಿ. ಅವರು ಕನ್ನಡಕ್ಕಾಗಿ ಮಾಡಿದ ಸೇವೆ ಅನಂತ. 'ಕನ್ನಡಕ್ಕಾಗಿ ಕೈಯೆತ್ತು ನಿನ್ನ ಕೈ ಕಲ್ಪವೃಕ್ಷವಾಗುವುದು' ಎಂದು ಮಿಂಚಿನ ಸಂದೇಶವನ್ನು ಕೊಟ್ಟವರು ಕುವೆಂಪು.

ಕನ್ನಡದ ಬೆಳವಣಿಗೆಗೆ, ಅದರ ಸಮೃದ್ಧಿಗೆ ದುಡಿದ ಕುವೆಂಪುರವರು "ಕನ್ನಡದ ವಿಷಯದಲ್ಲಿ ನಾನು ಟ್ಯಾಂಕಿನಂತೆ ಮುನ್ನುಗುತ್ತೇನೆ; ನೀವು ದಾರಿ ಬಿಟ್ಟು ಕೊಟ್ಟಿರೋ ಸರಿ, ಇಲ್ಲವೋ ಅಪ್ಪಚ್ಚಿಯಾಗುತ್ತೀರಿ!"[೨] ಎಂದು ಗುಡುಗುತ್ತಾರೆ. ಆದರೆ, ಬೇರೆ ಭಾಷೆಗಳ ಅರಿವು ಅಗತ್ಯವಾಗಿದೆ. ಒಬ್ಬ ಮನುಷ್ಯ ತನ್ನ ಸಾಮರ್ಥ್ಯಕ್ಕೆ ತಕ್ಕಂತೆ, ಅವನಿಗೆ ಸಾಧ್ಯವಾದಷ್ಟು ಭಾಷೆಗಳನ್ನು ಕಲಿಯುವುದರ ಜೊತೆಯಲ್ಲೇ ಕನ್ನಡವನ್ನು ಬೆಳೆಸಲಿ ಎಂದು ಹೇಳುತ್ತಾ ಇಂಗ್ಲಿಷ್ ಭಾಷೆಯ ತಿಳಿವಳಿಕೆ ಯಾವ ಕಾರಣಕ್ಕೆ ಅಗತ್ಯವೆಂದು ಮಗ ತೇಜಸ್ವಿಗೆ ದೀರ್ಘವಾಗಿ ಹೇಳಿದ ಮಾತುಗಳಿವು.

"ನೀನು ಇಂಗ್ಲಿಷ್ ಚೆನ್ನಾಗಿ ಕಲಿಯಬೇಕಾಗಿರುವುದು ನಿನ್ನ ಅಗತ್ಯಕ್ಕಾಗೇ ಹೊರತು ಇಂಗ್ಲಿಷಿನವರ ಅಗತ್ಯಕ್ಕಾಗಿ ಅಲ್ಲ. ನಿನಗೆ ಅದರಲ್ಲಿರುವ ಪ್ರಪಂಚದ ಜ್ಞಾನವೆಲ್ಲಾ ಬೇಕಾದರೆ

---

೧. ಕುವೆಂಪು ಸಮಗ್ರ ಕಾವ್ಯ ಸಂಪುಟ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೨. ಕುವೆಂಪು, ವಿಚಾರ ಕ್ರಾಂತಿಗೆ ಆಹ್ವಾನ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ಪು. ೭೩.

ಈ ಸಬೂಬುಗಳನ್ನೆಲ್ಲಾ ಬಿಟ್ಟು ಕಷ್ಟಪಟ್ಟು ಕಲಿ. ಅದು ಬಿಟ್ಟು ಕನ್ನಡದಲ್ಲೇ ಎಲ್ಲಾ ಇದೆ ಎಂದು ತಿಳಿದು ಕೂಪ ಮಂಡೂಕ ಆಗಬೇಡ. ಬೇಕಾದಷ್ಟು ಜನ ಪಂಡಿತರು ಪೋಲಿ ಜೋಕುಗಳನ್ನು ಮಾಡಿಕೊಂಡು ಪಾಠ ಮಾಡುತ್ತಾ ಕಾಲೇಜಿನ ಕೋಡಂಗಿಗಳಾಗಿ ಕಾಲ ಯಾಪನೆ ಮಾಡುತ್ತಿರುವುದಕ್ಕೆ ಕಾರಣ ಈ ರೀತಿಯ ಹುಸಿ ಪಾಂಡಿತ್ಯ. ಕನ್ನಡದಲ್ಲಿ ಏನೂ ಇಲ್ಲ ಎಂದು ತಿಳಿಯುವುದಕ್ಕಿಂತ ಕನ್ನಡದಲ್ಲಿ ಎಲ್ಲಾ ಇದೆ ಎಂದು ತಿಳಿಯುವುದು ಸಾಹಿತ್ಯದ ವಿದ್ಯಾರ್ಥಿಗಳಿಗೆ ಹೆಚ್ಚು ಅಪಾಯಕಾರಿಯಾದ ಮೌಢ್ಯ. ಇಂಗ್ಲಿಷರು ಸಹ ತಮ್ಮ ಭಾಷೆ ಕುರಿತು ಇಂಥ ಮಾತುಗಳನ್ನಾಡುವುದಿಲ್ಲ. ಎಲ್ಲಾ ಬಾಷೆಯಲ್ಲೂ ಎಲ್ಲಾ ಇದೆ ಎಂದು ತಿಳಿಯುವವನು ಮೂರ್ಖ ಎಂದರು. ಇಡೀ ಜೀವಮಾನವನ್ನೇ ಕನ್ನಡಕ್ಕೆ ಮುಡುಪಾಗಿಟ್ಟ ಅಣ್ಣ ಆವತ್ತು ನನಗೆ ಹೇಳಿದ ಮಾತುಗಳನ್ನು ಆ ಸನ್ನಿವೇಶದಿಂದ ಪ್ರತ್ಯೇಕಿಸಿ ನೋಡಿದರೆ ಕನ್ನಡದ ದ್ವೇಷಿ ಎಂದೇ ತಿಳಿದು ಬಿಡಬಹುದೇನೋ! ಭಾಷೆಯ ಬಗ್ಗೆ ಸಾಹಿತ್ಯದ ಬಗ್ಗೆ ಯಾವ ಸಂದರ್ಭದಲ್ಲೂ ಅಂಧಾಭಿಮಾನಕ್ಕೆ ಬಲಿಯಾಗದೆ ವಿವೇಕಯುತ ವಿವೇಚನೆ ಮಾಡುತ್ತಿದ್ದುದಕ್ಕೆ ಅಣ್ಣನ ಆವತ್ತಿನ ಮಾತುಗಳು ಸಾಕ್ಷಿಯಾಗಿವೆ".[೧]

ಈ ರೀತಿಯಾಗಿ ಕನ್ನಡ ಸಾಹಿತ್ಯವು ಅತ್ಯಮೂಲ್ಯವಾದ ಸಂಪತ್ತಿನಿಂದ ಕೂಡಿದೆ ಎಂದು ತಿಳಿಸುತ್ತಾ ಇಂತಹ ಸಾಹಿತ್ಯ ಪರಂಪರೆಯನ್ನು ಯಶಸ್ವಿಯಾಗಿ ಮುಂದುವರೆಸಿಕೊಂಡು ಬಂದಂತಹವರೇ ೨೦ನೇ ಶತಮಾನದ ಮಹಾಕವಿ ಕುವೆಂಪುರವರು. ಇಂತಹ ಮಹಾನ್‌ಕವಿ. ರಾಷ್ಟ್ರಕವಿಯು ನಿರೀಕ್ಷೆಗೂ ಮೀರಿದಂತಹ ಮಹಾಕಾವ್ಯವಾದ 'ಶ್ರೀ ರಾಮಾಯಣ ದರ್ಶನಂ', ಮಹಾಭಾರತಕ್ಕೆ ಸಂಬಂಧಿಸಿದಂತಹ 'ಸ್ಮಶಾನ ಕುರುಕ್ಷೇತ್ರಂ, ಬೆರಳ್ಗೆ ಕೊರಳ್, ಯಮನ ಸೋಲು, ಚಂದ್ರಹಾಸ' ಹೀಗೆ ಸಂಸ್ಕೃತಮಯವಾಗಿರುವಂತಹ ಗ್ರಂಥವನ್ನು, ನಾಟಕವನ್ನು ಹಾಗೂ ಇದಷ್ಟೇ ಅಲ್ಲದೆ ಈ ರೀತಿಯ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಆದರೆ, ಈ ಸಂಸ್ಕೃತವು ಸಾಮಾನ್ಯರಿಗೆ ಅರ್ಥವಾಗದ ಭಾಷೆಯಾಗಿದ್ದು ಅದನ್ನು ಅರ್ಥಮಾಡಿಕೊಂಡು ತಿಳಿಯುವುದು ಕಷ್ಟಸಾಧ್ಯ.

ಇಂತಹ ಸಂಸ್ಕೃತ, ಇಂಗ್ಲಿಷ್ ಪರಿಸರದಲ್ಲಿದ್ದ ಕುವೆಂಪುರವರು ಪ್ರತಿಯೊಬ್ಬ ಸಾಮಾನ್ಯ ಮನುಷ್ಯನಿಗೂ ಅರ್ಥವಾಗುವ ರೀತಿ ಸರಳ ಭಾಷೆಯಲ್ಲಿ ಪರಿಚಯಿಸಿದ್ದೇ ಈ 'ಮಕ್ಕಳ ಸಾಹಿತ್ಯ'. ಮಕ್ಕಳು ಎಂದರೆ ಮುಗ್ಧತೆ, ಸರಳತೆ ಎಂಬುದನ್ನು ಅರಿತ ಕುವೆಂಪು ತಮ್ಮ ಮಕ್ಕಳ ಸಾಹಿತ್ಯದಲ್ಲಿ ಅತೀ ಸರಳವಾದ ಆಡುಭಾಷೆಯನ್ನು ಬಳಸಿಯೇ ಮಕ್ಕಳಿಗೆ ಸುಲಭ ರೀತಿಯಲ್ಲಿ ಅರ್ಥವಾಗುವಂತೆ ಪರಿಚಯಿಸಿದ್ದಾರೆ. ಈ ರೀತಿಯ ಅಂಶಗಳನ್ನು ಒಳಗೊಂಡಿರುವಂತಹ

---

೧. ಪೂರ್ಣಚಂದ್ರ ತೇಜಸ್ವಿ, ಅಣ್ಣನ ನೆನಪು, ಪುಸ್ತಕ ಪ್ರಕಾಶನ, ಸರಸ್ವತಿಪುರಂ, ಮೈಸೂರು, ಪು. ೧೯೦.

ಮಕ್ಕಳ ಸಾಹಿತ್ಯದಲ್ಲಿ 'ಕಥೆ, ನಾಟಕ, ಕವನಗಳನ್ನು' ಕುವೆಂಪುರವರು ಚಿತ್ರಿಸಿದ್ದಾರೆ ಎಂಬುದು ಈಗಾಗಲೇ ತಿಳಿದಿರುವಂತಹ ವಿಷಯವಾಗಿದೆ. ಹಾಗಾಗಿ, ಅವರು ಸರಳವಾಗಿ ರಚಿಸಿರುವಂತಹ ಕವನಗಳನ್ನು ಅವಲೋಕಿಸುವುದಾದರೆ,

"ದೇವರ ಪೆಪ್ಪರಮೆಂಟೇನಮ್ಮಾ
ಗಗನದೊಳಲೆಯುವ ಚಂದಿರನು?
ಎಷ್ಟೇ ತಿಂದರೂ ಖರ್ಚೇ ಆಗದ
ಬೆಳೆಯುವ ಪೆಪ್ಪರಮೆಂಟೇನಮ್ಮಾ!"[೧]

ಈ ಕವನದಲ್ಲಿ ಮಕ್ಕಳು ಪ್ರಕೃತಿಯಲ್ಲಿನ ಸೂರ್ಯ, ಚಂದ್ರ ಮೋಡಗಳನ್ನು ನೋಡಿ ತನ್ನಲ್ಲಿರುವ ಮುಗ್ಧತೆಯಿಂದ ಆಶ್ಚರ್ಯವನ್ನು ವ್ಯಕ್ತಪಡಿಸುತ್ತವೆ. ಹಾಗೆಯೇ, ಇದರಲ್ಲಿ ಕವಿ ಸರಳಭಾಷೆಯಾದ, ಮಕ್ಕಳು ದಿನನಿತ್ಯ ಬಳಸುವಂತಹ ಚಂದ್ರನನ್ನು ಪೆಪ್ಪರಮೆಂಟಿಗೆ ಹೋಲಿಸಿರುವುದು ಇದಕ್ಕೆ ಸಾಕ್ಷಿಯಾಗಿದೆ. ಏಕೆಂದರೆ ಮಕ್ಕಳಿಗೆ ಸಿಹಿ ಪದಾರ್ಥವೆಂದರೆ ಅಚ್ಚು-ಮೆಚ್ಚು. ಹಾಗಾಗಿ ಇಲ್ಲಿ ಕುವೆಂಪುರವರು ಸಿಹಿಪದಾರ್ಥವಾದ ಪೆಪ್ಪರಮೆಂಟು ಎನ್ನುವ ಮೂಲಕ ಚಂದ್ರನನ್ನು ಮಕ್ಕಳಿಗೆ ಪರಿಚಯಿಸುತ್ತಿದ್ದಾರೆ.

ಪ್ರತೀ ದಿನ ಆಕಾಶದಲ್ಲಿರುವ ಪೆಪ್ಪರಮೆಂಟೆಂಬ ಚಂದಿರನನ್ನು ನೋಡಿದ ಸಂದರ್ಭದಲ್ಲಿ ಸಹಜವಾಗಿಯೇ ತನಗೂ ಕೂಡ ಆ ಪೆಪ್ಪರಮೆಂಟು ಬೇಕೆಂದು ತನ್ನ ತಾಯಿಯನ್ನು ಕೇಳಿಯೇ ಬಿಡುತ್ತದೆ. ಅಂದರೆ ಇಲ್ಲಿ ಮಕ್ಕಳು ಎಷ್ಟರಮಟ್ಟಿಗೆ ಸಿಹಿಪದಾರ್ಥವನ್ನು ಇಷ್ಟಪಡುತ್ತಾರೆ ಎಂಬುದರ ಜೊತೆಗೆ ಕುವೆಂಪು ಚಂದ್ರನನ್ನು ಮಕ್ಕಳಿಗೆ ತಕ್ಕಂತೆ ಪೆಪ್ಪರಮೆಂಟಿಗೆ ಹೋಲಿಸಿರುವುದು ಅಮೋಘವಾಗಿದೆ.

ಆದರೆ, ಈ ಕವನದಲ್ಲಿ ಮಗುವಿಗೆ ಚಂದಿರನನ್ನು ಪರಿಚಯಿಸುವುದು ಒಂದೆಡೆಯಾದರೆ, ಕವನದ ಕೊನೆಯಲ್ಲಿ ತಾಯಿ ಮಗುವಿನ ಪ್ರೀತಿ-ವಾತ್ಸಲ್ಯ ಮಗುವು ತಾಯಿಯ ಮೇಲಿಟ್ಟಿರುವ ಪ್ರೀತಿಯನ್ನು ತಿಳಿದುಕೊಳ್ಳಬಹುದಾಗಿದೆ. ಪೆಪ್ಪರಮೆಂಟನ್ನು ಕೇಳಿದ ಮಗುವಿಗೆ ನೀನೂ ದೇವರ ಮಗುವಾದರೆ ನಿನಗೂ ಕೊಡುವನೆಂದು ತಾಯಿ ಉತ್ತರಿಸುತ್ತಾಳೆ. ಆದರೆ, ಮಗುವು...

"ದೇವರ ಬಾಲಕನಾಗಲು ಒಲ್ಲೆ;
ಆತನ ಮೀರಿಹೆ ನೀನಮ್ಮಾ!

೧. ದೇ.ಜ.ಗೌ., ಜಿ.ಎಸ್.ಶಿವರುದ್ರಪ್ಪ, ಪ್ರಧಾನ್ ಗುರುದತ್ತ, ಕುವೆಂಪು ಸಂಚಯ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ೨೦೦೯, ಬೆಂಗಳೂರು, ಪು. ೩೬೧.

ತಾಯಿಯನಗಲಿಸಿ ದೇವರ ಹಿಡಿಸುವ
ಪೆಪ್ಪರಮೆಂಟೂ ಬೇಡಮ್ಮಾ!"[೧]

ಎಂದು ಹೇಳುವ ಮಗುವಿನಲ್ಲಿ ತನ್ನ ತಾಯಿಗಿಂತ ಯಾವುದೂ ದೊಡ್ಡದಲ್ಲ. ತನ್ನ ತಾಯಿಯಿಂದ ದೂರ ಉಳಿಯುವುದು ಕಷ್ಟವೆಂದು ಅರಿತು ತನಗಿಷ್ಟವಾಗಿರುವ ಪೆಪ್ಪರಮೆಂಟನ್ನೇ ಬೇಡವೆಂದು ಹೇಳಿಬಿಡುತ್ತದೆ.

ಮಕ್ಕಳ ಮನಸ್ಸನ್ನು ಅರಿತಿರುವ ಕುವೆಂಪು ತಾವೂ ಕೂಡ ಎಲ್ಲರಂತೆ ಪುಟ್ಟ ಮಗುವಾಗಿ, ಮುಗ್ಧ ಮನಸ್ಸಿನಿಂದ ಇಂತಹ ಕವನಗಳನ್ನು ರಚಿಸಲು ಸಾಧ್ಯವಾಗಿದೆ.

ಕವಿಯು ಮಕ್ಕಳಿಗೆ ತಿಳಿಯದೇ ಇರುವಂತಹ ವಸ್ತುಗಳ ಬಗ್ಗೆ, ವಿಷಯಗಳ ಬಗ್ಗೆ ಪರಿಚಯಿಸುವುದರ ಜೊತೆಯಲ್ಲಿಯೇ ಮಕ್ಕಳಲ್ಲಿ ಸಂಬಂಧಗಳ ಬಗ್ಗೆ ಅರಿವನ್ನು ಮೂಡಿಸುತ್ತಾರೆ. ಹಾಗೂ ಆ ಸಂಬಂಧವನ್ನು ಗಟ್ಟಿಗೊಳಿಸುತ್ತಾರೆ. ಅಂತಹ ಪ್ರಯತ್ನವನ್ನು ಕುವೆಂಪುರವರು ಸಹ ಮಾಡಿದ್ದಾರೆ.

"ಮನೇ ಮನೇ ಮುದ್ದು ಮನೇ
ಮನೇ ಮನೇ ನನ್ನ ಮನೇ!

ನನ್ನ ತಾಯಿಯೊಲಿದ ಮನೆ,
ನನ್ನ ತಂದೆ ಬೆಳೆದ ಮನೆ;

ನನ್ನ ಗೆಳೆಯರೊಡನೆ ಕೂಡಿ,
ಮುದ್ದು ಮಾತುಗಳನು ಆಡಿ,
ಮಕ್ಕಳಾಟಗಳನು ಹೂಡಿ

ನಾನೂ ನಲಿದ ನನ್ನ ಮನೆ!"[೨]

ಮಗುವು ತಾನು ಹುಟ್ಟಿ ಬೆಳೆದಂತಹ ಮನೆ, ತನ್ನ ತಂದೆ-ತಾಯಿ, ತಮ್ಮ-ತಂಗಿ, ಅಜ್ಜ-ಅಜ್ಜಿ, ಗೆಳೆಯ-ಗೆಳತಿ ಇವರೆಲ್ಲರ ಸಂಬಂಧವನ್ನು ತಿಳಿದುಕೊಳ್ಳುವುದರ ಜೊತೆಗೆ ಆ ಸಂಬಂಧಕ್ಕೆ ಪ್ರಾಮುಖ್ಯತೆಯನ್ನು ನೀಡುತ್ತದೆ.

---

೧. ದೇ.ಜ.ಗೌ., ಜಿ.ಎಸ್.ಶಿವರುದ್ರಪ್ಪ, ಪ್ರಧಾನ್ ಗುರುದತ್ತ, ಕುವೆಂಪು ಸಂಚಯ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ೨೦೦೯, ಬೆಂಗಳೂರು, ಪು. ೩೬೧.

೨. ಅದೇ.,

'ಮನೆ' ಎಂಬುದು ಪುಟ್ಟ ಮಕ್ಕಳಿಗೂ ಗೊತ್ತಿರುವಂತಹ 'ಶಬ್ಧ'ವಾಗಿದೆ. ಇದರ ಮೂಲಕವೇ ಮಕ್ಕಳ ಮನಸ್ಸಲ್ಲಿ ಹಳ್ಳಿಯ ಪರಿಸರ, ತನ್ನ ಸಂತೋಷದ ದಿನ, ಕಷ್ಟದ ದಿನಗಳನ್ನು ನೆನೆಸಿಕೊಳ್ಳುವ ರೀತಿಯಲ್ಲಿ ಕವಿ ಇದನ್ನು ಪರಿಚಯಿಸಿದ್ದಾರೆ.

'ಮನೆ' ಎಂಬುವುದರ ಮೂಲಕ ಮನುಷ್ಯನು ತನ್ನ ಸಂಬಂಧಗಳನ್ನು ಕೂಡಿ ಹಾಕಿಕೊಂಡು ಜೀವನ ನಡೆಸಲು ಕಟ್ಟಿಕೊಳ್ಳುವ ಒಂದು ಸುಂದರವಾದ ಮಹಲಾಗಿದೆ. 'ಮನೆ'ಯನ್ನೇ ಪ್ರಧಾನವಾಗಿಟ್ಟುಕೊಂಡು ಮಕ್ಕಳಿಗೆ ಆಡುಭಾಷೆಯ ಮೂಲಕ ಕವಿ 'ನನ್ನ ಮನೆ, ನಮ್ಮವರು, ನನ್ನದು, ನಾನು' ಎಂಬಂತಹ ಪದಗಳನ್ನು ಬಳಸಿ ಸಂಬಂಧಗಳನ್ನು ಗಟ್ಟಿಗೊಳಿಸುವುದರ ಮೂಲಕ ಮಕ್ಕಳಲ್ಲಿ, ಮಕ್ಕಳ ಮನಸ್ಸಿಗೆ ಲಗ್ಗೆ ಇಟ್ಟಿದ್ದಾರೆ. ಇಷ್ಟೇ ಅಲ್ಲದೆ ಈ ಕವನದಲ್ಲಿ ಬರುವಂತಹ ಪ್ರಾಸ ಪದಗಳು 'ಹಳ್ಳಿ-ಬಳ್ಳಿ, ತುರು-ಕರು, ಕೆರೆ-ತೊರೆ' ಇಂತಹ ಪದಗಳ ಮೂಲಕ ಕುವೆಂಪು ಅವರ ಕವನಗಳು ಹೆಚ್ಚು ಆಕರ್ಷಿತವಾಗಿವೆ.

"ಅವ್ವಾ, ಅಪ್ಪನ ನೀನೇಕೆ
'ಅಪ್ಪಾ' ಎನ್ನುವುದಿಲ್ಲವ್ವಾ?
ಅಪ್ಪನ 'ಅಪ್ಪಾ' ಎನ್ನದಿರೆ
ಕೆಟ್ಟವನಾಗುವೆ ನೀ'ನೆಂದೆ!
ಕೆಟ್ಟವಳಲ್ಲವೆ ನೀನವ್ವಾ;
ಅಪ್ಪನ 'ಅಪ್ಪಾ' ಎನ್ನವ್ವಾ!" [೧]

ಅವ್ವ, ಅಮ್ಮ, ಅಪ್ಪ ಎಂಬುದರಲ್ಲಿ ಏನೋ ಸೆಳೆತವಿದೆ. ತಂದೆ-ತಾಯಿಯನ್ನು ಹಾಗೆ ಕರೆಯುವುದರಲ್ಲಿ ಮನಸ್ಸಿಗೆ ತೃಪ್ತಿ, ಆನಂದ ಸಿಗುತ್ತದೆ. ಆದರೆ, ಇತ್ತೀಚಿನ ದಿನಗಳಲ್ಲಿ ನಗರ-ಪಟ್ಟಣಗಳಲ್ಲಿ ಇಂತಹ ಪದಗಳು ಮರೆಮಾಚಿ ಹೋಗಿ ಅವ್ವ-ಅಪ್ಪನ ಬದಲು 'ಮಮ್ಮಿ-ಡ್ಯಾಡಿ' ಎಂಬ ಪದಗಳನ್ನು ಮಕ್ಕಳು ಬಳಸುತ್ತಿರುವುದನ್ನು ನಮ್ಮ ಮನೆಗಳಲ್ಲೇ ಕಾಣುತ್ತಿದ್ದೇವೆ. ಇಷ್ಟೆಲ್ಲಾ ಇದ್ದರೂ ಕೂಡ ನಮ್ಮ ಸುತ್ತ-ಮುತ್ತಲಿನಲ್ಲಿರುವ ಹಳ್ಳಿಗಳಲ್ಲಿ ಅವ್ವ- ಅಪ್ಪ, ಅಪ್ಪಯ್ಯ ಎಂದು ಈಗಲೂ ಕರೆಯುತ್ತಿರುವುದು ಒಂದು ಸಮಾಧಾನದ ವಿಷಯವಾಗಿದೆ.

ಇಂತಹ ಪದಗಳನ್ನು ಬಳಸಿಯೇ ಮಗು ತನ್ನ ತಾಯಿಯನ್ನು ಪ್ರಶ್ನೆಗೊಳಪಡಿಸುತ್ತಿರುವುದನ್ನು ಕವಿ ತುಂಬಾ ಸೊಗಸಾಗಿ ಈ ಕವನದಲ್ಲಿ ಚಿತ್ರಿಸಿದ್ದಾರೆ. ತನ್ನ ಹುಟ್ಟಿಗೆ ಕಾರಣನಾದ ತಂದೆಯನ್ನು 'ಅಪ್ಪ' ಎಂದು ಕರೆಯಬೇಕು, ಕರೆಯದಿದ್ದರೆ ಕೆಟ್ಟವನಾಗುವೆ ನೀನು ಎಂದು ತಾಯಿ ತನ್ನ ಮಗುವಿಗೆ ಹೇಳಿದಾಗ ಅದಕ್ಕೆ ಮಗುವು ತನ್ನ

---

೧. ಕುವೆಂಪು, ಮರಿವಿಜ್ಞಾನಿ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೪೨, ಪು. ೯.

ಮುಗ್ಧತನದಿಂದ ನಾನೊಬ್ಬನೆ ಅಪ್ಪ ಎನ್ನಬೇಕೆ! ನೀನು ಕೂಡ ಅಪ್ಪ ಎಂದು ಕರೆಯದೆ ಕೆಟ್ಟವಳಾಗಿರುವೆ. 'ಅಪ್ಪಾ' ಎಂದು ನೀನು ಕೂಡ ಕರೆಯಬೇಕೆಂದು ಮಗು ಹೇಳುತ್ತಿದೆ.

ಇಲ್ಲಿ ಕುವೆಂಪು ಅವ್ವ, ಅಪ್ಪ ಎಂಬಂತಹ ಮನೆಮಾತನ್ನೇ ಬಳಸಿ ಈ ಕವನವನ್ನು ರಚಿಸಿರುವುದರಿಂದ ಮನಸ್ಸಿಗೆ ತುಂಬಾ ಹತ್ತಿರವಾಗುತ್ತದೆ. ದೂರವಾಗುತ್ತಿರುವ ಇಂತಹ ಕನ್ನಡ ಪದಗಳನ್ನು ಮಕ್ಕಳು ಮತ್ತೆ ಬಳಸುವುದರಿಂದ ಕನ್ನಡ ಭಾಷೆಯು ಸಾರ್ಥಕತೆಯನ್ನು ಕಾಣುತ್ತದೆ.

ಕವಿ ಕುವೆಂಪು ಕೂಡ 'ತೀರ್ಥಹಳ್ಳಿ' ಎಂಬ ಹಳ್ಳಿ ಪರಿಸರದಲ್ಲಿ ಹುಟ್ಟಿರುವುದರಿಂದ ಅವರ ತಂದೆ-ತಾಯಿಯನ್ನು ಹೀಗೆಯೇ ಅವ್ವ-ಅಪ್ಪ ಎಂದು ಅನ್ನುತ್ತಿದ್ದರೇನೊ? ಆದ್ದರಿಂದ ಇಂತಹ ಕವನದಲ್ಲಿ ತಾನೇ ಒಂದು ಮಗುವಾಗಿ ತನ್ನ ತಾಯಿಯನ್ನು ಪ್ರಶ್ನಿಸುತ್ತಿರುವಂತೆ ಕವಿಯು ಈ ಕವಿತೆಯನ್ನು ರಚಿಸಿದ್ದಾರೆ ಎಂದು ಭಾವಿಸಬಹುದು.

"ಮಲಗು ಮಲಗೆಲೆ ಕಂದಾ ಜೋ! ಜೋ!
ಮಲಗು ಎನ್ನಾ ನಂದಾ ಜೋ! ಜೋ!
ನಿದ್ದೆಯೂರದು ಚೆಂದ ಜೋ! ಜೋ!
ಮುದ್ದು ಕಂದಾ ಮಲಗು ಜೋ! ಜೋ!"[೧]

ಯಾವ ಮಗುವಿಗೆ ತಾನೆ ಜೋಗುಳ ಎಂದರೆ ಇಷ್ಟವಾಗುವುದಿಲ್ಲ. ಅದರಲ್ಲೂ ತಾನು ಮಲಗುವ ಸಮಯದಲ್ಲಿ ತನ್ನ ತಾಯಿಯ ಮಡಿಲಲ್ಲಿ ತಲೆಯಿಟ್ಟು ಮಲಗಿ ಅವಳು ಹೇಳುವ ಜೋಗುಳವನ್ನು ಕೇಳುತ್ತಿದ್ದರೆ ಬರದೇ ಇರುವ ನಿದ್ರಾ ದೇವತೆಯು ಕೂಡ ಬಂದು ಆವರಿಸುತ್ತಾಳೆ.

ಇಂತಹ ಚೆಂದದ ಜೋಗುಳವನ್ನು ಕುವೆಂಪು ಪ್ರತೀ ಒಂದು ಮಗುವಿಗು ಹೇಳುತ್ತಿದ್ದಾರೆ. 'ಕಂದಾ' ಎಂದು ಹೇಳುತ್ತಲೇ ಆತ್ಮೀಯತೆಯನ್ನು ವ್ಯಕ್ತಪಡಿಸುತ್ತಿದ್ದಾರೆ. ಇಡೀ ಕವಿತೆಯನ್ನು ಗಮನಿಸಿದಾಗ, ಪ್ರತೀ ಸಾಲಿನಲ್ಲೂ ಕೂಡ 'ಜೋ ಜೋ' ಎಂಬ ಜೋಗುಳದ ನಾದವಿದೆ. ಇಂತಹ ನಾದವನ್ನೇ ಬಳಸಿ ಕುವೆಂಪು ಇಡೀ ಕವನವನ್ನು ರಚಿಸುವುದರ ಮೂಲಕ ಪುಟ್ಟ, ಪುಟ್ಟ ಮಕ್ಕಳ ಮನಸ್ಸನ್ನು ಗೆದ್ದಿದ್ದಾರೆ.

ಕುವೆಂಪುರವರು ತಮ್ಮ ತನು-ಮನವೆಲ್ಲಾವನ್ನು ತಾಯ್ನಾಡಿಗೆ ಮೀಸಲಿಟ್ಟಿದ್ದರು. ಅವರಲ್ಲಿ ದೇಶಾಭಿಮಾನ, ಭಾಷಾಭಿಮಾನವು ರಕ್ತಗತವಾಗಿ ಹರಿದುಬಂದಿತ್ತು. ಅಂತಹ

---

೧. ಕುವೆಂಪು, ಮರಿವಿಜ್ಞಾನಿ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೪೨, ಪು. ೧೩.

ಅಭಿಮಾನವನ್ನು ಮಕ್ಕಳಲ್ಲೂ ಅಳವಡಿಸುವಂತಹ ಅನೇಕ ಕವನಗಳನ್ನು ಮಕ್ಕಳ ಸಾಹಿತ್ಯದಲ್ಲಿ ಮಕ್ಕಳಿಗೂ ಅರ್ಥವಾಗುವಂತೆ ತುಂಬಾ ಸರಳವಾದ ಭಾಷೆಯನ್ನೇ ಬಳಸಿ ರಚಿಸಿದ್ದಾರೆ.

"ಏಳಿರೈ! ಬಾಲರೇ! ದೇಶಸೇವೆಗೈಯುವ!
ಕೇಳಿರೈ! ಕೇಳಿರೈ! ತಾಯ ಗೋಳ ರೋದನ!

ಧೂಳಾಗಿವೆ ಜನನಿಯ ಮುಖ
ಹಾಳಾಗಿದೆ ಜನನಿಯ ಸುಖ!

ಏಳಿ! ಏಕೆ ಜಡತನ?
ಏಳಿ! ಸಾಕು ಬಡತನ!"[೧]

ಇಂತಹ ಕವಿತೆಗಳ ಮೂಲಕ ಮಕ್ಕಳಲ್ಲಿ ಧೈರ್ಯವನ್ನು ತುಂಬಿ, ಕಿಚ್ಚನ್ನು ಹುಟ್ಟಿಸುತ್ತಿದ್ದಾರೆ. 'ಏಳಿರೈ! ಬಾಲರೇ!' ಎಂದು ಮೊದಲ ಸಾಲಿನಲ್ಲೇ ಹೇಳಿರುವ ಕುವೆಂಪು ನೇರವಾಗಿ ಮಕ್ಕಳಿಗೆ ಕೂಗಿ ಹೇಳುತ್ತಿದ್ದಾರೆ. ಇಷ್ಟು ದಿನ ಬಡತನವನ್ನು ಅನುಭವಿಸಿದ್ದು ಸಾಕು. ನಮ್ಮಲ್ಲಿರುವ ಜಡತನವನ್ನು ಹೋಗಲಾಡಿಸಿ ಹಾಳಾಗಿರುವ ನಮ್ಮ ಭಾರತಾಂಬೆಯನ್ನು ಕಾಪಾಡಲು ಎಲ್ಲರೂ ಒಟ್ಟಿಗೆ ಸೇರಿ ದೇಶಸೇವೆಯನ್ನು ಮಾಡುವ ಮೂಲಕ ನಮ್ಮ ತಾಯಿಯನ್ನು ರಕ್ಷಿಸಿಕೊಳ್ಳೋಣವೆಂದು ಕವಿ ಕುವೆಂಪು ಈ ಕವನವನ್ನು ರಚಿಸಿ ಎಲ್ಲಾ ಮಕ್ಕಳಲ್ಲೂ ದೇಶಾಭಿಮಾನವನ್ನು ಹುಟ್ಟಿಸಿದ್ದಾರೆ. ಇದೇ ರೀತಿ 'ಎದ್ದೇಳು' ಕವಿತೆಯಲ್ಲೂ ಕೂಡ ಕವಿಯು ಮಕ್ಕಳಿಗೆ ನಮ್ಮ ತಾಯಿ ಭಾರತಾಂಬೆಯನ್ನು ಕಾಪಾಡಲು ಮುನ್ನುಗುವಂತೆ ಎಚ್ಚರಿಸುತ್ತಿದ್ದಾರೆ.

ಇಲ್ಲಿ ಕವಿಯು 'ಏಳಿರೈ! ಕೇಳಿರೈ ಬಾಲರೇ!' ಎಂದು ಹೇಳುವ ಮೂಲಕ ಮಲಗಿರುವವರನ್ನು ಬಡಿದೆಬ್ಬಿಸುವ ರೀತಿಯಲ್ಲಿ ಎಲ್ಲರಿಗೂ ಎಚ್ಚರಿಕೆ ಗಂಟೆಯನ್ನು ಬಾರಿಸುತ್ತಿದ್ದಾರೆ.

ಕುವೆಂಪುರವರು ರಚಿಸಿರುವ 'ನರಿಗಳಿಗೇಕೆ ಕೋಡಿಲ್ಲ' ಎಂಬ ಕಥೆಯು ತುಂಬಾ ಸೊಗಸಾಗಿ ಮೂಡಿಬಂದಿದೆ ಎಂತಹವರಾದರೂ ಓದಿ ತಿಳಿಯಬಹುದಾದ ಆಡುಭಾಷೆಯನ್ನೇ ಬಳಸಿ ತುಂಬಾ ಸರಳವಾಗಿ ಎಲ್ಲರ ಮನಮುಟ್ಟುವಂತೆ ಅದರಲ್ಲೂ ಮಕ್ಕಳ ಮನಸ್ಸನ್ನು ಸೆಳೆಯುವ ಮೂಲಕ ನೀತಿ ಪಾಠದ ಸಂದೇಶವನ್ನು ಕೂಡ ರವಾನಿಸಿದ್ದಾರೆ.

ಈ ಕೃತಿಯಲ್ಲಿ ಕವಿಯು ಪ್ರಾಣಿ-ಪಕ್ಷಿಗಳನ್ನೇ ಆಧಾರವಾಗಿಟ್ಟುಕೊಂಡು ಕಥೆಯನ್ನು ರಚಿಸಲಾಗಿದ್ದರೂ ಕೂಡ ಇದರಲ್ಲಿ ಬರುವ ಪ್ರತಿಯೊಂದು ಸನ್ನಿವೇಶವನ್ನು ಗಮನಿಸಿದರೆ,

---

೧. ಕುವೆಂಪು, ಮೇಘಪುರ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೪೨, ಪು. ೭

ನಮ್ಮ ಸುತ್ತ-ಮುತ್ತಲೇ ಈ ರೀತಿಯ ಘಟನೆಗಳೆಲ್ಲಾ ನಿಜವಾಗಿ ನಡೆದಿದೆಯೇನೋ ಎಂಬಂತೆ ಭಾಸವಾಗುತ್ತದೆ. ಅಷ್ಟೊಂದು ಅಚ್ಚುಕಟ್ಟಾಗಿ ಕುವೆಂಪು ಈ ಕೃತಿಯನ್ನು ರಚಿಸಿದ್ದಾರೆ.

ಈ ಕಥೆಯಲ್ಲಿ ಕವಿಯು ಪ್ರಾಣಿ-ಪಕ್ಷಿಗಳನ್ನು ಸಹ 'ಗುಬ್ಬಕ್ಕ, ಗುಬ್ಬಣ್ಣ, ನರಿಯಣ್ಣ, ಹುಲಿಯಣ್ಣ, ಕರಡ್ಯಣ್ಣ' ಎಂದು ಎಷ್ಟು ಆತ್ಮೀಯತೆಯಿಂದ ಮಕ್ಕಳಿಗೆ ಪರಿಚಯಿಸಿದ್ದಾರಲ್ಲವೇ!

ಇಲ್ಲಿ ಬರುವ ಗುಬ್ಬಕ್ಕನ ಮನೆಯ ಕಲ್ಪನೆಯನ್ನು ಕವಿ ಅಮೋಘವಾಗಿ ಪರಿಚಯಿಸಿದ್ದಾರೆ. ನಿಜವಾಗಲೂ ಅದೊಂದು ಸವಿಯಾದ ಮನೆಯೆ. ಬೆಲ್ಲದ ಗೋಡೆ, ಸಕ್ಕರೆ ಬಾಗಿಲು, ಕಬ್ಬಿನ ಮುಚ್ಚುಗೆ, ಮನೆಯ ಅಂಗಳದಲ್ಲಿರುವ ಜೇನುತುಪ್ಪದ ಸರೋವರ. ಇದೆಲ್ಲಾ ಕವಿಯ ಕಲ್ಪನೆಗೆ ಮೀರಿದ್ದು ಎನ್ನಬಹುದು.

ಈ ಕಥೆಯಲ್ಲಿ ಗುಬ್ಬಕ್ಕ ಮತ್ತು ನರಿಯಣ್ಣನಿಗೂ ಒಂದು ಸನ್ನಿವೇಶದಲ್ಲಿ ನಡೆಯುವ ಮಾತುಕತೆಯನ್ನು ಕವಿ ಎಷ್ಟು ಸೊಗಸಾಗಿ ನಮ್ಮ ಮುಂದೆ ಇಟ್ಟಿದ್ದಾರೆ ಎಂಬುದನ್ನು ಈ ಮೂಲಕ ತಿಳಿದುಕೊಳ್ಳೋಣ.

"ಗುಬ್ಬಕ್ಕ: 'ಯಾರಪ್ಪಾ ಅದು?' ಎಂದಳು.

ನರಿಯಣ್ಣ: 'ನಾನವ್ವಾ!' ಎಂದನು

'ನಾನು ಎಂದರೆ?'

ನಾನು ನರಿಯಣ್ಣ!'

'ಅಕ್ಕಾ, ಮಳೆಯಲ್ಲಿ ಸಿಕ್ಕಿ ಸಾಕಾಗಿದೆ. ಬೆಳಗಾಗುವ ತನಕ ಸ್ವಲ್ಪ ಜಾಗ ಕೊಟ್ಟರೆ ಸಾಕು' ಎಂದನು ನರಿಯಣ್ಣ"[೧]

ಈ ರೀತಿಯಾಗಿ ಮಳೆಯಲ್ಲಿ ಸಿಕ್ಕಿಕೊಂಡಾಗ ಗುಬ್ಬಕ್ಕನ ಮನೆಯಲ್ಲಿ ಆಶ್ರಯ ಬಯಸಿ ಸಹಾಯ ಕೇಳಿದ ನರಿಯಣ್ಣನಿಗೂ - ಗುಬ್ಬಕ್ಕನಿಗೂ ನಡೆದಿರುವ ಸಂಭಾಷಣೆಯಲ್ಲಿ ಸಹೋದರ-ಸಹೋದರಿಯ ಭಾವನೆಯನ್ನು, ಬಾಂಧವ್ಯವನ್ನು ಕಾಣಬಹುದು. ನರಿಯಣ್ಣ, ಗುಬ್ಬಕ್ಕ ಎಂದು ಹೇಳುವ ಮೂಲಕ ಕವಿಯು ಮಕ್ಕಳಿಗೆ ಅಣ್ಣ-ಅಕ್ಕ ಎಂಬುದರಲ್ಲಿರುವ ಬಾಂಧವ್ಯವನ್ನು ಪರಿಚಯಿಸಿದ್ದಾರೆ.

---

೧. ಕುವೆಂಪು, ನರಿಗಳಿಗೇಕೆ ಕೋಡಿಲ್ಲ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೬೭, ಪು. ೩.

ಮಕ್ಕಳಿಗೆ ಪ್ರಾಣಿ-ಪಕ್ಷಿಗಳೆಂದರೆ ಅಚ್ಚು-ಮೆಚ್ಚು. ಆದ್ದರಿಂದಲೇ ಮಕ್ಕಳ ಮನಸ್ಸನ್ನು ಅರ್ಥಮಾಡಿಕೊಂಡಿರುವ ಕುವೆಂಪು ಸಹಜವಾಗಿಯೇ ಅತೀ ಜಾಣ್ಮೆಯಿಂದ ಈ ಕಥೆಯನ್ನು ರಚಿಸಿದ್ದಾರೆ.

ಮೇಲೆ ತಿಳಿಸಿದಂತೆ ಕವಿಯು ರಚಿಸಿರುವ ಸಣ್ಣ-ಪುಟ್ಟ ಪದಗಳು ಕೂಡ ಮನಸ್ಸಿಗೆ ತುಂಬಾ ಹತ್ತಿರವೆನಿಸುತ್ತದೆ. ಗುಬ್ಬಕ್ಕ ನರಿಯಣ್ಣನಿಗೆ 'ಯಾರಪ್ಪಾ ಅದು?' ಎನ್ನುವುದು. ಅದಕ್ಕೆ ನರಿಯಣ್ಣ 'ನಾನವ್ವ' ಎಂಬುದರಲ್ಲಿ ಇರುವಂತಹ ಆತ್ಮೀಯತೆಯನ್ನು ಅವರ ಮಾತಿನಲ್ಲಿ ಗಮನಿಸಬಹುದು.

ಭಾರತಾಂಬೆಯ ಆರಾಧಕರಾಗಿರುವ ಕುವೆಂಪುರವರು ಈ ಕಥೆಯಲ್ಲೂ ಕೂಡ ಒಂದು ಸನ್ನಿವೇಶವನ್ನು ರೂಪಿಸಿ ಮಕ್ಕಳಿಗೆ ದೇಶಕ್ಕಾಗಿ ಹೋರಾಡಿದ ಮಹಾತ್ಮರ ಪರಿಚಯವನ್ನು ಮಾಡಿಕೊಡುತ್ತಾರೆ.

ಮಹಾತ್ಮಾಗಾಂಧಿ, ಶ್ರೀರಾಮಕೃಷ್ಣ, ವಿವೇಕಾನಂದರ ಚಿತ್ರಪಟವನ್ನು ಮನೆಯಲ್ಲಿ ಇಡುವುದರಿಂದ ಅವರ ಸನ್ನಿಧಿಯಲ್ಲಿಯೇ ಮಕ್ಕಳು ಬೆಳೆಯುವುದರಿಂದ ಅವರೂ ಮಹಾತ್ಮರಾಗಿ ಭಾರತಾಂಬೆಯ ಉದ್ಧಾರ ಮಾಡುತ್ತಾರೆ. ಅದಕ್ಕಾಗಿ ದಿನವೂ ಅವರಿಗೆ ಅವರ ಕಥೆಗಳನ್ನು ಜೋಗುಳದಂತೆ ಹೇಳಿ, ಅವರೆಲ್ಲರ ಮಹಿಮೆಯನ್ನು ಹಾಲು-ಬೆಣ್ಣೆಯಲ್ಲಿ ಊಡುತ್ತೇನೆಂದು ಗುಬ್ಬಕ್ಕ ಹೇಳುವ ಮಾತನ್ನು ಕವಿ ತುಂಬಾ ಅದ್ಭುತವಾಗಿ ಸನ್ನಿವೇಶವನ್ನು ಸೃಷ್ಟಿಸಿ ಸನ್ನಿವೇಶಕ್ಕೆ ತಕ್ಕಂತಹ ಮಾತುಗಳಲ್ಲಿ ಬಂದಿರುವ ಕವಿಯ ರಚನೆಯನ್ನು ಪ್ರಶಂಸಿಸಲೇಬೇಕು.

ಹಿರಿಯರು-ಕಿರಿಯರೆನ್ನದೆ ಎಲ್ಲರ ಮನಸ್ಸನ್ನು ಕದ್ದಿರುವ, ಎಲ್ಲರನ್ನೂ ಹಾಸ್ಯದ ಲೋಕಕ್ಕೆ ಕರೆದೊಯ್ಯುವ ಕೃತಿಯೇ 'ಬೊಮ್ಮನ ಹಳ್ಳಿಯ ಕಿಂದರಿ ಜೋಗಿ'. ಇದು ಕುವೆಂಪು ಅವರಿಗೆ ಅಪಾರ ಜನಪ್ರಿಯತೆಯನ್ನು ತಂದುಕೊಟ್ಟಂತಹ ಒಂದು ಸುಂದರ ಕವನವಾಗಿದೆ.

ಈ ಕವನದಲ್ಲಿ ಇಲಿಗಳ ಕಾಟವನ್ನೇ ಹಳ್ಳಿಯ ದೊಡ್ಡ ಸಮಸ್ಯೆ ಎಂಬಂತೆ ಚಿತ್ರಿಸಿರುವ ಕುವೆಂಪು ಅಂತಹ ಇಲಿಗಳ ಸಮಸ್ಯೆಯನ್ನು ಪರಿಹರಿಸಲು ಅತಿಮಾನುಷ ವ್ಯಕ್ತಿಯಾದ ಜೋಗಿಯ ಪ್ರವೇಶಕ್ಕೆ ತುಂಬ ಸುಂದರವಾದ ವೇದಿಕೆಯನ್ನು ಕೂಡ ಕಲ್ಪಿಸಿದ್ದಾರೆ.

ಇಲಿಗಳ ಕಾಟದಿಂದ ಬೇಸತ್ತಿರುವ ಬೊಮ್ಮನಹಳ್ಳಿಯ ಜನರಿಗೆ ದೇವರಂತೆ ಬಂದು ಅವರ ಕಷ್ಟವನ್ನು ಪರಿಹರಿಸುವವನೇ ಈ ಕಿಂದರಿಜೋಗಿ. ಈತ ತನ್ನ ಕಿಂದರಿ ನಾದದ ಮೂಲಕ ಎಲ್ಲರನ್ನೂ ಆಕರ್ಷಿಸುತ್ತಾನೆ. ಇವನ ಬರುವಿಕೆಯೇ ಎಲ್ಲರನ್ನು ಹೇಗೆ ಬೆರಗುಗೊಳಿಸುತ್ತದೆ ಎಂಬುದನ್ನು ಈ ಕವನದಲ್ಲಿ ಗಮನಿಸಬಹುದು.

"ಬಂದನು ಬಂದನು ಕಿಂದರಿ ಜೋಗಿ!
ಕೆದರಿದ ಕೂದಲ ಗಡ್ಡದ ಜೋಗಿ!
ನಾನಾ ಬಣ್ಣದ ಬಟ್ಟೆಯ ಜೋಗಿ!
ಕೈಯಲಿ ಕಿಂದರಿ ಹಿಡಿದಾ ಜೋಗಿ!

ಕುದುರೆಯ ಗೊರಸಿನ ಅಡಿಗಳ ಜೋಗಿ!
ಕಡವೆಯ ಕೊಂಬಿನ ತಲೆಯಾ ಜೋಗಿ!
ಆನೆಯ ಕಿವಿಗಳ ಕಿಂದರಿ ಜೋಗಿ!
ಹಂದಿಯ ದಾಡೆಯ ಕೋರೆಯ ಜೋಗಿ!

ಮಂಗನ ಮೂತಿಯ ಮುಡಿದಿಹ ಜೋಗಿ!
ಬಂದನು ಬಂದನು ಕಿಂದರಿ ಜೋಗಿ!
ಹಾರುತ ತೇಲುತಲಿಳಿದನು ಜೋಗಿ!"[೧]

ಈ ಕವನದ ಸಾಲುಗಳನ್ನು ನೋಡಿದರೆ ಜೋಗಿಯನ್ನು ಪರಿಚಯಿಸುವ ಪ್ರತಿಯೊಂದು ಸಾಲುಗಳ ಕೊನೆಯಲ್ಲಿ ' ಜೋಗಿ- ಜೋಗಿ' ಎಂದು ಕವಿಯು ತನ್ನ ರಚನೆಯಿಂದಲೇ ಎಲ್ಲರನ್ನು ಆಕರ್ಷಿಸಿದ್ದಾರೆ.

ಇದರಲ್ಲಿ ಬಂದಿರುವ ಪದಗಳ ಜೋಡಣೆ ತುಂಬ ಸೊಗಸಾಗಿ ಮೂಡಿಬಂದಿವೆ. ಅಂದರೆ, 'ಕುದುರೆಯ ಗೊರಸು, ಕಡವೆಯ ಕೊಂಬು, ಆನೆಯ ಕಿವಿ, ಹಂದಿಯ ದಾಡೆ, ಮಂಗನ ಮೂತಿ' ಹೀಗೆ ಕವಿ ಎಲ್ಲಿಂದ ಎಲ್ಲಿಗೋ ಸಂಬಂಧವನ್ನು ಸೃಷ್ಟಿಸಿ ಸರಳವಾದ ಪದಗಳಿಂದ ಕವನವನ್ನು ರಚಿಸಿ ಮಕ್ಕಳ ಗಮನವನ್ನು ಸೆಳೆದಿದ್ದಾರೆ.

ಸಾಮಾನ್ಯವಾಗಿ ಎಲ್ಲರೂ ಒಂದು ಬಗೆಯ ಇಲಿಯನ್ನು ಕಂಡಿರುತ್ತಾರೆ. ಆದರೆ, ಈ ಕವನದಲ್ಲಿ ಕುವೆಂಪು ನಾನಾ ಬಗೆಯ ಇಲಿಗಳನ್ನು ಪರಿಚಯಿಸಿದ್ದಾರೆ.

"ಇಲಿಗಳು! ಇಲಿಗಳು! ಇಲಿಗಳ ಹಿಂಡು!
ಬಳಬಳ ಬಂದುವು ಇಲಿಗಳ ದಂಡು!

ಸಣ್ಣಿಲಿ, ದೊಡ್ಡಿಲಿ, ಮೂಗಿಲಿ, ಸುಂಡಿಲಿ,
ಅಣ್ಣಿಲಿ, ತಮ್ಮಿಲಿ, ಅವ್ವಿಲಿ, ಅಪ್ಪಿಲಿ,
ಮಾವಿಲಿ, ಬಾವಿಲಿ, ಅಕ್ಕಿಲಿ, ತಂಗಿಲಿ,
ಗಂಡಿಲಿ, ಹೆಣ್ಣಿಲಿ, ಮುದುಕಿಲಿ, ಹುಡುಗಿಲಿ
ಬಂದವು ನಾನಾ ಬಣ್ಣದ ಇಲಿಗಳು

---

೧. ಕುವೆಂಪು, ಬೊಮ್ಮನ ಹಳ್ಳಿಯ ಕಿಂದರಿಜೋಗಿ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೪, ಪು. ೧೧.

ಕೆಂಪಿನ ಇಲಿಗಳು, ಹಳದಿಯ ಇಲಿಗಳು,
ಬೆಳ್ಳಿಲಿ, ಕರಿಯಿಲಿ, ಗಿರಿಯಿಲಿ, ಹೊಲದಿಲಿ
ಕುಂಕುಮರಾಗದ, ಚಂದನರಾಗದ,
ಹಸುರಿನ ಬಣ್ಣದ, ಪಚ್ಚೆಯ ವರ್ಣದ,
ಸಂಜೆಯ ರಾಗದ, ಗಗನದ ರಾಗದ,
ನಾನಾವರ್ಣದ ಇಲಿಗಳು ಬಂದುವು"[೧]

ಈ ರೀತಿಯ ಇಲಿಗಳನ್ನು ಪರಿಚಯಿಸುವುದರೊಂದಿಗೆ ಕವಿ ಹಾಸ್ಯ ಚಟಾಕಿಯನ್ನೇ ಬರಿಸಿದ್ದಾರೆ. ಬೇಸರದಿಂದಿರುವವರು ಯಾರೇ ಆದರೂ ಈ ಕವನವನ್ನು ಓದಿದರೆ ಬೇಸರವೇ ಮಂಗಮಾಯವಾಗುತ್ತದೆ. ಅಂತಹ ಶಕ್ತಿಯನ್ನು ಈ ಕವನದಲ್ಲಿ ಕಾಣಬಹುದು. ಇಲಿಗಳ ಚಿತ್ರಣವನ್ನು ಇಷ್ಟೊಂದು ಸೊಗಸಾಗಿ, ಹಾಸ್ಯಮಯವಾಗಿ ಚಿತ್ರಿಸಬಹುದೆಂದು ಕುವೆಂಪುರವರ ಈ ಕವನದಿಂದ ತಿಳಿದುಕೊಳ್ಳಬಹುದು.

ಇಂತಹ ಪದಜೋಡಣೆಯೇ ಮಕ್ಕಳ ಮನಸ್ಸನ್ನು ಹೆಚ್ಚಾಗಿ ಆಕರ್ಷಿಸಿದ್ದು ಈ ಕವನದ ಮೆರಗನ್ನು ಮತ್ತಷ್ಟು ಇಮ್ಮಡಿಗೊಳಿಸುವಲ್ಲಿ ಸಹಕಾರಿಯಾಗಿದೆ.

'ಗೋವಿನ ಹಾಡು'ವಿನಂತೆ ಇರುವ ಕನ್ನಡದ ಅತ್ಯಂತ ಪ್ರಸಿದ್ಧ ಕವನ 'ಅಮಲಿನ ಕಥೆ'ಯು ಕುವೆಂಪುರವರ ಮೊಟ್ಟಮೊದಲ ರಚನೆಯ ಕೃತಿಯಾಗಿದೆ.

ನಿರ್ಮಲ ಭಕ್ತಿಗೆ ದೇವರು ಒಲಿಯುತ್ತಾನೆ ಎಂಬುದನ್ನು ಸಾದರಪಡಿಸುವ ಕೃತಿಯು ಇದಾಗಿದ್ದು, ಜೀವನದಲ್ಲಿ ಬಡತನವಿದ್ದರೂ ದೇವರನ್ನು ಪೂಜಿಸುವ ಭಕ್ತಿಗೇನು ಬಡತನವಿರಲಿಲ್ಲ ಎಂಬುದನ್ನು ಕಥೆಯ ನಾಯಕನಾದ ಅಮಲನು ನಿರೂಪಿಸುವಂತೆ ಕವಿಯು ಈ ಕವನದ ಮೂಲಕ ಮಕ್ಕಳಿಗೆ ಉದಾತ್ತ ನೀತಿಯನ್ನು ಬಿತ್ತಲು ಪ್ರಯತ್ನಿಸಿದ್ದಾರೆ.

ಸದಾಕಾಲ ಹರಿಯನ್ನು ಭಜಿಸುವ ಅಮಲ ಭಕ್ತಿಸಾಗರದಲ್ಲಿ ತೇಲಾಡುತ್ತಾನೆ. ದೇವರನ್ನು ತನ್ನ ನಿರ್ಮಲ ಭಕ್ತಿಯಿಂದ ಪೂಜಿಸುವ ಈತನು ಹರಿಯನ್ನು ಹಾಡಿ ಹೊಗಳುತ್ತಾನೆ.

"ಪುಷ್ಪಶೋಭಿತ ಪುಷ್ಪ ರೂಪನೆ
ಪುಷ್ಪಕೇಶದ ಪುಷ್ಪಲೋಲನೆ,
ಪುಷ್ಪನಾಭನೆ ಪುಷ್ಪ ನೇತ್ರನೆ
ಪುಷ್ಪಭಕ್ತನ ಕಾಯಲೈ!

---

೧. ಕುವೆಂಪು, ಬೊಮ್ಮನ ಹಳ್ಳಿಯ ಕಿಂದರಿಜೋಗಿ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೪, ಪು. ೧೭.

ಚಂದರೂಪನೆ ನಂದಗೋಪನೆ,
ಇಂದುಮುಖಿಯರ ರಮ್ಯರಮಣನೆ
ಬಂಧನಾಶನೆ ಮಂದಹಾಸನೆ
ವಂದಿಪೆನು ನಾ ರಕ್ಷಿಸೈ

ವಿಶ್ವರೂಪನೆ ವಿಶ್ವಜ್ಞಾನಿಯೆ
ವಿಶ್ವನಂದನೆ ವಿಶ್ವಲೋಲನೆ
ವಿಶ್ವಕರುಣಾ ವಿಶ್ವಸಾಗರ
ವಿಶ್ವಹೇತುವೆ ಪಾಲಿಸೈ"[೧]

ದೇವರನ್ನು ಈ ರೀತಿಯೆಲ್ಲಾ ವರ್ಣಿಸಬಹುದು ಎಂಬುದನ್ನು ಇಂತಹ ಸಾಲುಗಳಿಂದ ಕವಿ ತಿಳಿಸುತ್ತಿದ್ದಾರೆ. ಇಲ್ಲಿ ಕುವೆಂಪು ನಾನಾ ಬಗೆಯಲ್ಲಿ ಹರಿಯನ್ನು ವರ್ಣಿಸುವುದರ ಮೂಲಕ ಹಾಡಿಕೊಂಡಾಡಿದ್ದಾರೆ. ಇಲ್ಲಿನ ಪ್ರತಿಯೊಂದು ಸಾಲುಗಳು ಅದರದೇ ಆದ ಅರ್ಥದಿಂದ ಕೂಡಿದ್ದು ಗಾಂಭಿರ್ಯವನ್ನು ಒಳಗೊಂಡಿದೆ. ಇಲ್ಲಿ ಬಂದಿರುವ ಪ್ರತಿಯೊಂದು ಪದಗಳು ಆ ಪದಗಳ ಪ್ರತಿಯೊಂದು ಸಾಲುಗಳನ್ನು ಅವಲೋಕಿಸುತ್ತಿದ್ದರೆ ಇದೆಲ್ಲ ಕೇವಲ ಕವಿಗೆ ಮೀಸಲೇನೊ ಎಂಬಂತೆ ಭಾಸವಾಗುತ್ತದೆ. ಇಂತಹ ಕನ್ನಡ ಭಾಷೆಯನ್ನು ತುಂಬಾ ಅಚ್ಚುಕಟ್ಟಾಗಿ ಬಳಸಿ ಸರಳವಾಗಿ ಮಕ್ಕಳಿಗೆ ಪರಿಚಯಿಸುತ್ತಿದ್ದಾರೆ.

ಒಬ್ಬ ಸಾಮಾನ್ಯ ವ್ಯಕ್ತಿಗೆ ಇರದ ಶಕ್ತಿಯನ್ನು ನಾವೆಲ್ಲ ಕವಿ ಕುವೆಂಪು ಅವರಿಗಿರುವ ದಿವ್ಯಶಕ್ತಿಯ ಮೂಲಕ ತಿಳಿದುಕೊಳ್ಳಬಹುದಾಗಿದೆ. ಒಂದು ಪುಟ್ಟ ಪದದಿಂದಲೇ ಸುಂದರವಾದ ಒಂದು ಕವನವನ್ನೇ ರಚಿಸುವಂತಹ ಚಾಣಾಕ್ಷತೆ ಕೇವಲ ಕವಿಗೆ ಮಾತ್ರ ಇರುವುದು ಎಂಬುದನ್ನು ಕುವೆಂಪುರವರನ್ನು ನೋಡಿ ತಿಳಿಯಬಹುದು.

ಈ ಕವನದಲ್ಲಿ ಅಮಲನು, ಹರಿಣವನ್ನು ಕೊಲ್ಲಲು ಮುಂದಾಗಿರುವ ಬೇಡನಿಗೆ 'ಕರುಣೆ'ಯ ಬಗ್ಗೆ ಬುದ್ಧಿಮಾತುಗಳನ್ನು ಹೇಳುವ ಸನ್ನಿವೇಶದಲ್ಲಿ ಕವಿಯು ಕರುಣೆಯ ಹೊಳೆಯನ್ನೇ ಹರಿಸಿದ್ದಾರೆ.

"ಧರಣಿಯೊಳಗಿಹ ಜೀವರೊಳಗೆ,
ಇರುಳು ಚಲಿಸುವ ಅಸುರರೊಳಗೆ,
ನರನು ಪರಮನು ಎಂದು ಉಸುರಲು
ಕರುಣೆ ಎಂಬುದೆ ಸಾಕ್ಷಿಯು!

---

೧. ಕುವೆಂಪು, ಅಮಲನ ಕಥೆ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೪, ಪು. ೨.

ಕರುಣೆ ಎಂಬುದು ದೇವ ದೇವನ
ಪರಮ ಸನ್ನಿಧಿಯಿಂದ ಬರುವುದು!
ಕರುಣೆ ಎಂಬುದೆ ನರರು ಸುರರೊಳು
ಹರಿಯ ನಾಮದಿ ಚರಿಪುದು!"[೧]

'ಕರುಣೆ' ಎಂಬುದು ಮಾನವೀಯ ಮೌಲ್ಯಗಳಲ್ಲಿ ಇರುವಂತಹ ಒಂದು ಮುಖ್ಯವಾದ ಅಂಶ. ಇಂತಹ ಕರುಣೆ ಎಂಬುದರ ಹಿಂದೆ ಇರುವ ಒಳಾರ್ಥವನ್ನು ಕವಿ ಕುವೆಂಪು ಸನ್ನಿವೇಶಕ್ಕೆ ತಕ್ಕಂತೆ ಬಳಸಿ ಅದರ ಅರ್ಥವನ್ನು ಎಲ್ಲರಿಗೂ ಪರಿಚಯಿಸಿದ್ದಾರೆ.

ಕವಿಯು ಒಂದು ಪದವನ್ನು ಹಲವು ಮುಖಗಳಲ್ಲಿ ತಾಳೆ ಹಾಕಿ ನೋಡಿ ಅದರಲ್ಲಿರುವ ಅರ್ಥದ ಸಾರವನ್ನು ತಾನೂ ಸವಿದು ಇತರರಿಗೂ ಉಣಬಡಿಸುತ್ತಾನೆ ಎಂಬುದನ್ನು ಈ ರೀತಿಯ ಕವನಗಳಲ್ಲಿ ತಿಳಿಯಬಹುದಾಗಿದೆ.

ಅಮ್ಮ-ಮಗ ಮನೆಯಲ್ಲಿರಬೇಕಾದರೆ ಯಾವ ರೀತಿ ಪ್ರೀತಿಯಿಂದ, ಆತ್ಮೀಯವಾಗಿ ಮಾತನಾಡುತ್ತಾರೋ ಅದೇ ರೀತಿಯಲ್ಲಿ ಕುವೆಂಪು "ನನ್ನ ಗೋಪಾಲ' ನಾಟಕವನ್ನು ಸರಳವಾದ ಆಡುಭಾಷೆಯಲ್ಲಿಯೇ ಮಕ್ಕಳಿಗೆ ಸುಲಭವಾಗಿ ಅರ್ಥವಾಗುವಂತೆ ರಚಿಸಿದ್ದಾರೆ. ಈ ನಾಟಕವನ್ನು ಕವಿಯು ಕಣ್ಣಿಗೆ ಕಟ್ಟುವಂತೆ ಬಹು ಸೊಗಸಾಗಿ ಚಿತ್ರಿಸಿದ್ದಾರೆ. ಇಲ್ಲಿ ಬರುವ ಪ್ರತಿಯೊಂದು ಸನ್ನಿವೇಶವು ಒಂದಕ್ಕಿಂತ ಒಂದು ಹತ್ತಿರವಾಗುತ್ತಾ ಹೋಗುತ್ತದೆ.

"ತಾಯಿ: ಗೋಪಾಲ ನೀನು ಕರುಣಾಸಾಗರ, ಅನಾಥರಕ್ಷಕ, ದೀನಬಂಧು. ಬಡವಳಾದ ನನ್ನ ಮೇಲೆ ನಿನ್ನ ಕರುಣೆಯ ಮಳೆಯನ್ನು ಕರೆದೆ! ಇಗೋ ನಿನಗೆ ಶರಣು ಶರಣು".[೨]

ಹೀಗೆ ಗೋಪಾಲನ ತಾಯಿಯು ವಿಗ್ರಹದ ಮುಂದೆ ಕುಳಿತು ಕೃಷ್ಣನನ್ನು ಪೂಜಿಸುತ್ತಾ ವಂದಿಸುತ್ತಾಳೆ. ತನ್ನ ನಿರ್ಮಲವಾದ ಭಕ್ತಿಯಿಂದ ಪೂಜಿಸಿ ಭಕ್ತಿಯ ಮಳೆಯನ್ನೇ ಸುರಿಸುತ್ತಾಳೆ.

ಈ ನಾಟಕದಲ್ಲಿ ಕವಿಯು ಬನದ ಗೋಪಾಲ – ಪುಟ್ಟಬಾಲಕ (ಗೋಪಾಲ)ನ ಪಾತ್ರವನ್ನು ತುಂಬಾ ಅದ್ಭುತವಾಗಿ ಚಿತ್ರಿಸಿದ್ದಾರೆ.

---

೧. ಕುವೆಂಪು, ಅಮಲನ ಕಥೆ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೪, ಪು. ೧೨.

೨. ದೇ.ಜ.ಗೌ., ಜಿ.ಎಸ್.ಶಿವರುದ್ರಪ್ಪ, ಪ್ರಧಾನ್ ಗುರುದತ್ತ, ಕುವೆಂಪು ಸಂಚಯ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ೨೦೦೯, ಬೆಂಗಳೂರು, ಪು. ೩೭೮.

ಬನದ ಗೋಪಾಲನೇ ದೇವರೆಂದು ತಿಳಿಯದೆ ತನ್ನ ಅಣ್ಣನೆಂದು ಭಾವಿಸಿ ತುಂಬಾ ಆತ್ಮೀಯವಾಗಿ ಮುಗ್ಧ ಮನಸ್ಸಿನಿಂದ ಗೋಪಾಲನು ಸುಲಲಿತವಾಗಿ ಮಾತಿಗಿಳಿಯುತ್ತಾನೆ.

ತನಗೆ ಕಾಡಿನಲ್ಲಿ ಭಯವಾದಾಗ ತನ್ನ ತಾಯಿಯ ಮಾತಿನಂತೆ ಬನದ ಗೋಪಾಲನನ್ನು ನೆನೆದು ಹೀಗೆ ಕರೆಯುತ್ತಾನೆ:

"ಗೋಪಾಲಣ್ಣಾ, ಗೋಪಾಲಣ್ಣಾ! ಗೋಪಾಲಣ್ಣಾ!

ಅಣ್ಣಾ, ಅಣ್ಣಾ! ಏ ಅಣ್ಣಾ! ನನಗೆ ಹೆದರಿಕೆ, ಅಣ್ಣಾ, ಕತ್ತಲಾಗುತ್ತಿದೆ. ಎಲ್ಲಿದ್ದೀಯಣ್ಣಾ, ಏ ಗೋಪಾಲ!

ಎಲ್ಲಿದ್ದೀಯಾ? ಹೆದರಿಕೆಯಾಗುತ್ತಿದೆ ನನಗೆ. ಅಮ್ಮ ಹೇಳಿದಳು. ಹೆದರಿಕೆಯಾದರೆ ನಿನ್ನನ್ನು ಕರೆ ಅಂತ.

**ಬನದ ಗೋಪಾಲ:** ಏನೋ, ಗೋಪಾಲ? ಹೆದರಬೇಡ, ನಾನಿಲ್ಲಿಯೇ ಇದ್ದೇನೆ. ಧೈರ್ಯವಾಗಿ ಹೋಗು ಮನೆಗೆ". [೧]

ಹೀಗೆ ನಾಟಕವು ಮುಂದೆ ಸಾಗುತ್ತಾ ಹೋಗುತ್ತದೆ. ತಾಯಿಯ ಮಾತೇ ವೇದವಾಕ್ಯವಾಗಿರುವ ಈ ಮಗನಿಗೆ ತನ್ನ ತಾಯಿ ಏನೇ ಹೇಳಿದರೂ ಅದರಂತೆ ಪಾಲಿಸುತ್ತಾನೆ. ಈ ನಾಟಕದಲ್ಲಿ ಕವಿಯು ತಾಯಿ-ಮಗನ ಪ್ರೀತಿ-ವಾತ್ಸಲ್ಯವನ್ನು ಗಾಢವಾಗಿರುವಂತೆ ಬಿಂಬಿಸಿದ್ದಾರೆ.

"**ಗೋಪಾಲ:** ಅಮ್ಮ, ನಾಳೆ ನಮ್ಮ ಗುರುಗಳ ಮನೆಯಲ್ಲಿ ಏನೊ ವಿಶೇಷವಂತೆ. ಎಲ್ಲರೂ ಗುರುದಕ್ಷಿಣೆ ತಂದುಕೊಟ್ಟು ಆಶೀರ್ವಾದ ಪಡೆಯುತ್ತಾರೆ. ನನಗೂ ಏನಾದರೂ ಕೊಡಮ್ಮ, ಗುರುದಕ್ಷಿಣೆಗಾಗಿ

**ತಾಯಿ:** ಆಗಲಿ, ಮಗು, ಗುರುಗಳ ಆಶೀರ್ವಾದ ಪರಮಾತ್ಮನ ಆಶೀರ್ವಾದಕ್ಕಿಂತಲೂ ಕಡಿಮೆಯಾದುದಲ್ಲ. ಅವರ ಕೃಪೆ ನಿನ್ನ ಮೇಲೆ ಇರಬೇಕು. ಗುರುವೇ ಬ್ರಹ್ಮ, ಗುರುವೇ ವಿಷ್ಣು, ಗುರುವೇ ಸಾಕ್ಷಾತ್ ಪರಮೇಶ್ವರ ಎಂದು ಮಹಾತ್ಮರು ಹೇಳಿದ್ದಾರೆ. ಗುರುವನ್ನು ಭಕ್ತಿಯಿಂದ ಪೂಜಿಸು, ದೇವರು ಮೆಚ್ಚುತ್ತಾನೆ".[೨]

ಈ ರೀತಿಯಾಗಿ ತಾಯಿಯು ತನ್ನ ಮಗನಿಗೆ ಒಳ್ಳೆಯ ನೀತಿಪಾಠವನ್ನು ಜೀವನದಲ್ಲಿ ಅಳವಡಿಸಿಕೊಳ್ಳುವಂತೆ ಸಲಹೆ ನೀಡುತ್ತಾಳೆ. ಇಂತಹ ಮಾತುಗಳ ಮೂಲಕವೇ ಕವಿಯು ಎಲ್ಲರ ಗಮನವನ್ನು ಸೆಳೆಯುತ್ತಾ ಹೋಗುತ್ತಾರೆ.

---

೧. ದೇ.ಜ.ಗೌ., ಜಿ.ಎಸ್.ಶಿವರುದ್ರಪ್ಪ, ಪ್ರಧಾನ್ ಗುರುದತ್ತ, ಕುವೆಂಪು ಸಂಚಯ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ೨೦೦೯, ಬೆಂಗಳೂರು, ಪು. ೩೮೧.

೨. ಅದೇ., ಪು. ೩೯೩.

ಇಲ್ಲಿ ಕವಿ ಕುವೆಂಪುರವರ ಕೈ ಚಳಕವನ್ನು ಪ್ರಶಂಶಿಸಲೇಬೇಕು. ಅತೀ ಸರಳವಾಗಿ ಯಾವುದೇ ರೀತಿಯ ಆಡಂಬರವಿಲ್ಲದೆ ಮಕ್ಕಳ ಮನಸ್ಸಿಗೆ ಹತ್ತಿರವಾಗುವಂತೆ ಕಥೆಯ ರೂಪದಲ್ಲಿರುವ ನಾಟಕವನ್ನು ನಮ್ಮ ಮುಂದಿಟ್ಟಿದ್ದಾರೆ. ಇದು ನಾಟಕವೋ ಅಥವಾ ನೈಜ ಘಟನೆಯೋ ಎಂಬಂತೆ ಮನಸ್ಸಿಗೆ ಭಾಸವಾಗುತ್ತದೆ. ಆ ರೀತಿಯಲ್ಲಿ ಕವಿಯು ದೃಶ್ಯವೇ ಕಣ್ಮುಂದೆ ಬರುವಂತೆ ಸರಳ ವಿಧಾನವನ್ನೇ ಅನುಸರಿಸಿ, ಸರಳವಾದ ಭಾಷೆಯನ್ನೇ ಬಳಸಿ ನಾಟಕವನ್ನು ರಚಿಸಿದ್ದಾರೆ. ದೃಶ್ಯದ ರೂಪದಲ್ಲಿರುವ ಇಂತಹ ನಾಟಕಗಳು ಕೊನೆಯ ತನಕ ಮಕ್ಕಳ ಮನಸ್ಸಿನಲ್ಲಿ ಉಳಿಯುವಂತೆ ಕವಿಯು ಪ್ರಯತ್ನಪಟ್ಟಿದ್ದಾರೆ.

ಕುವೆಂಪುರವರು 'ಮೋಡಣ್ಣನ ತಮ್ಮ' ಎಂಬ ನಾಟಕದಲ್ಲಿ ಇಡೀ ನಾಟಕದ ಕಥೆಯನ್ನು ಒಂದು ಸುಂದರವಾದ ಕಲ್ಪನೆಯ ಮೂಲಕ ಚಿತ್ರಿಸುತ್ತಾ ಹೋಗಿದ್ದಾರೆ.

ಈ ನಾಟಕದಲ್ಲಿ ಒಬ್ಬ ಪುಟ್ಟ ಬಾಲಕನು ಚಲಿಸುತ್ತಿರುವ ಮೋಡವನ್ನು ಕಂಡು ಅದಕ್ಕೆ ಆಕರ್ಷಿತನಾಗಿ ತಾನು ಕೂಡ ಮೋಡದಂತೆ ಗಗನದಲ್ಲಿ ತೇಲಾಡಬೇಕೆಂದು ತನ್ನ ಆಸೆಯನ್ನು ವ್ಯಕ್ತಪಡಿಸುತ್ತ ಸರಳವಾಗಿಯೇ ಮೋಡದ ಜೊತೆ ಮಾತಾಡಲು ಪ್ರಾರಂಭಿಸುತ್ತದೆ.

ಹುಡುಗ:– "ಓ ಮೋಡಣ್ಣಾ, ಓ ಮೋಡಣ್ಣಾ
ನಾನು ಬರುವೆನೊ ಕೈ ನೀಡಣ್ಣಾ!

ಮೋಡ:– ಬರಬೇಡಣ್ಣಾ! ಬರಬೇಡಣ್ಣಾ!
ಅವ್ವನು ಬೈವಳು ನೀ ನೋಡಣ್ಣಾ!" [೧]

ಈ ನಾಟಕದಲ್ಲಿ ಕವಿಯ ಕಲ್ಪನೆ ತುಂಬಾ ಅದ್ಭುತವಾಗಿದೆ. ಏಕೆಂದರೆ, ಬಾಲಕನು ಮೋಡವನ್ನು 'ಅಣ್ಣ' ಎಂದು ಕರೆದಿರುವುದು, ಆ ಚಲಿಸುವ ಮೋಡವನ್ನು ಕಂಡು ಬಾಲಕ ಆಕರ್ಷಣೆಗೊಳ್ಳುವ ರೀತಿ, ನಂತರ ಅವರಿಬ್ಬರ ಸಂಭಾಷಣೆ, ಆ ಸಂಭಾಷಣೆಯಲ್ಲಿ ಬರುವಂತಹ ಸರಳವಾದ ಮಾತುಗಳು ಇವುಗಳೆಲ್ಲ ಮಕ್ಕಳ ಮನಸ್ಸಿನಲ್ಲಿ ಆಸಕ್ತಿಯನ್ನು ಹುಟ್ಟಿಸುತ್ತದೆ.

ಕೊನೆಗೆ ಈ ನಾಟಕದಲ್ಲಿ ಕವಿಯು, ಮೋಡದ ಮೂಲಕವೇ ಆ ಪುಟ್ಟ ಬಾಲಕನಿಗೆ ಅವಶ್ಯಕವಾದ ಬುದ್ಧಿ ಮಾತುಗಳನ್ನು ಹೇಳಿಸುವ ಪರಿ ತುಂಬಾ ಸೊಗಸಾಗಿ ಮೂಡಿ ಬಂದಿದೆ.

"ಧರ್ಮಮೇಘ ನೀನಾಗಲು ಬೇಕು;
ಧರ್ಮದ ಮಳೆಯನು ಸುರಿಸಲು ಬೇಕು!

---

೧. ದೇ.ಜ.ಗೌ., ಜಿ.ಎಸ್.ಶಿವರುದ್ರಪ್ಪ, ಪ್ರಧಾನ್ ಗುರುದತ್ತ, ಕುವೆಂಪು ಸಂಚಯ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ೨೦೦೯, ಬೆಂಗಳೂರು, ಪು. ೩೬೭.

ಸತ್ಯವನೆಂದಿಗು ಬಿಡಬೇಡ:
ಮಿಥ್ಯೆಯನೆಂದೂ ಹಿಡಿಯಲು ಬೇಡ!
ಚಿತ್ತದಿ ಭಕ್ತಿಯ ಬೀಜವನು
ಬಿತ್ತುತ ಪಡೆಯೈ ಮುಕ್ತಿಯನು!

ದೇವರ ದಿನವೂ ಭಜಿಸಲು ಬೇಕೊ;
ಪಾವನನಾತನ ನೆನೆಯಲು ಬೇಕೊ;
ಮಾನವರೆಲ್ಲಾ ದೇವರ ಪುತ್ರರು;
ಆದುದರಿಂದವರೆಲ್ಲಾ ಮಿತ್ರರು!"[೧]

ಹೀಗೆ ಇನ್ನೂ ಮುಂದುವರಿದಂತೆ ಬುದ್ಧಿ ಮಾತುಗಳ ಮಳೆಯನ್ನೇ ಸುರಿಸಿರುವ ಕವಿಯು ಈ ನಾಟಕದ ಮೂಲಕ ಎಲ್ಲಾ ಮಕ್ಕಳಿಗೂ ಅಗತ್ಯವಿರುವ ನೀತಿಯನ್ನು ತಿಳಿಸುತ್ತಿದ್ದಾರೆ.

ಕೇಲವ ಕಲ್ಪನೆಯಿಂದಲೇ ಮೂಡಿರುವ ಈ ನಾಟಕದಲ್ಲಿ ಮುಖ್ಯವಾಗಿ ಮನುಷ್ಯ-ಪರಿಸರದಲ್ಲಿರುವ ಅನ್ಯೋನ್ಯ ಸಂಬಂಧವನ್ನು ಗಮನಿಸಬಹುದು. ಇಂತಹ ಕವಿಯ ಕಲ್ಪನೆಗೆ ಸರಿಸಾಟಿಯಾದುದು ಯಾವುದು ಇಲ್ಲ. ಏಕೆಂದರೆ, ಕನ್ನಡ ಭಾಷೆಯನ್ನು ಇಷ್ಟೊಂದು ಸರಳವಾಗಿ, ಸೊಗಸಾಗಿ ಬಳಸಿಕೊಂಡು ಈ ರೀತಿಯ ಕವನ, ಕಥೆ, ನಾಟಕಗಳನ್ನು ರಚಿಸಬಹುದು ಎಂಬುದನ್ನು ನಮ್ಮ ಕವಿ ಕುವೆಂಪು ಮಕ್ಕಳ ಸಾಹಿತ್ಯದ ಮೂಲಕ ಎಲ್ಲರಿಗೂ ತೋರಿಸಿಕೊಟ್ಟಿದ್ದಾರೆ.

ಹೀಗೆ ಕುವೆಂಪು ಅವರು ತಾವು ಪ್ರೀತಿಸಿ, ಗೌರವಿಸಿದ ಕನ್ನಡ ಭಾಷೆಯನ್ನು ತೀರಾ ಸರಳವಾಗಿ ಬಳಸಿ ಮಕ್ಕಳ ಮನಸ್ಸಿಗೆ ಆಹ್ಲಾದವನ್ನುಂಟು ಮಾಡಿದ್ದಾರೆ.

---

೧. ದೇ.ಜ.ಗೌ., ಜಿ.ಎಸ್.ಶಿವರುದ್ರಪ್ಪ, ಪ್ರಧಾನ್ ಗುರುದತ್ತ, ಕುವೆಂಪು ಸಂಚಯ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ೨೦೦೯, ಬೆಂಗಳೂರು, ಪು. ೩೭೩.

# ಅಧ್ಯಾಯ ಆರು

# ಉಪಸಂಹಾರ

ಮಲೆನಾಡಿನ ಮಡಿಲಿನಲ್ಲಿ ಪ್ರೀತಿಯ ಕೂಸಾಗಿ ಜನಿಸಿದ ಕುವೆಂಪು ಅವರು ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಒಬ್ಬ ಪ್ರಮುಖ ಸಾಹಿತಿಯಾಗಿ, ತತ್ವಜ್ಞಾನಿಯಾಗಿ, ವೈಚಾರಿಕ ಚಿಂತಕನಾಗಿ, ದಾರ್ಶನಿಕನಾಗಿ ಹಾಗೂ ಎಲ್ಲಕ್ಕಿಂತ ಹೆಚ್ಚಾಗಿ ಸಾಮಾನ್ಯರಲ್ಲಿ ಸಾಮಾನ್ಯನಾಗಿ ಪ್ರಸಿದ್ಧಿಯನ್ನು ಪಡೆದಿದ್ದಾರೆ. ಕನ್ನಡ ನಾಡಿಗೆ ಸಾಂಸ್ಕೃತಿಕ ನೆಲೆಗಟ್ಟನ್ನು ಒದಗಿಸಿದ ಇವರು ವರ್ಗೀಕೃತ ಶ್ರೇಣಿಗಳನ್ನು ವಿರೋಧಿಸುತ್ತಾ ಸಮಾನತೆಯ ಸಮಾಜವನ್ನು ನಿರ್ಮಿಸಬೇಕೆಂಬ ಆದರ್ಶವನ್ನು ಹೊಂದಿದ್ದರು. ಆದ್ದರಿಂದಲೇ, 'ಸರ್ವರಿಗೆ ಸಮಪಾಲು ಸರ್ವರಿಗೆ ಸಮಬಾಳು' ಎಂಬ ಸಂದೇಶವನ್ನು ವಿಶ್ವದೆಲ್ಲೆಡೆ ಸಾರಿದರು.

ಇಂತಹ ವಿಶ್ವಮಾನವನಿಗೆ ಅನೇಕ ವ್ಯಕ್ತಿಗಳ ಪ್ರಭಾವವಿರುವುದನ್ನು ಕಾಣಬಹುದು. ಅವರಲ್ಲಿ ಮುಖ್ಯವಾಗಿ 'ರಾಮಕೃಷ್ಣ, ಪರಮಹಂಸರು, ವಿವೇಕಾನಂದರು, ವರ್ಡ್ಸ್‌ವರ್ತ್, ಟಾಲ್‌ಸ್ಟಾಯ್ ಹಾಗೂ ಗುರುಗಳಾದ ಟಿ.ಎಸ್.ವೆಂಕಣ್ಣಯ್ಯ ಮತ್ತು ಎ.ಆರ್.ಕೃಷ್ಣಶಾಸ್ತ್ರಿ ಇವರೆಲ್ಲರ ಪ್ರಭಾವ ಕುವೆಂಪುರವರ ಮೇಲೆ ಆಗಿದೆ. ಇಂತಹವರ ಪ್ರಭಾವವನ್ನು ಪಡೆದಿರುವ ಕುವೆಂಪು ಅವರ ಸಾಹಿತ್ಯವು ಕೇವಲ ಸಾಹಿತ್ಯವಾಗಿ ಮಾತ್ರ ಉಳಿಯದೆ ಒಂದು ಅತ್ಯುತ್ತಮವಾದ ಮಟ್ಟವನ್ನು ತಲುಪಿದೆ. ಏಕೆಂದರೆ, ಅವರ ಯಾವುದೇ ಪ್ರಕಾರದ ಸಾಹಿತ್ಯವನ್ನು ಗಮನಿಸಿದರೂ ಅದರಲ್ಲಿ ಒಂದಲ್ಲ ಒಂದು ರೀತಿಯ ಸಂದೇಶವನ್ನು ಕಾಣುತ್ತೇವೆ.

ಕುವೆಂಪು ಅವರು ನವೋದಯ ಕಾಲದ ಪ್ರಮುಖ ಕವಿಯಾಗಿ ಕಾಣಿಸಿಕೊಂಡಿದ್ದಾರೆ. ಅವರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅದರಲ್ಲೂ 'ಮಕ್ಕಳ ಸಾಹಿತ್ಯ' ಕ್ಷೇತ್ರಕ್ಕೆ ನೀಡಿರುವ ಕೊಡುಗೆ ಮಹತ್ವ ಪೂರ್ಣವಾದುದಾಗಿದೆ.

ಆಧುನಿಕ ಕಾಲಘಟ್ಟದ ಪ್ರಮುಖ ಸಾಹಿತಿಯಾದ ಕುವೆಂಪುರವರು ಮಕ್ಕಳ ಸಾಹಿತ್ಯದಲ್ಲಿ ಕಥೆ, ಕವನ, ನಾಟಕಗಳ ಮೂಲಕ ಸರಳವಾದ ಭಾಷೆಯನ್ನು ಬಳಸಿ ಮಕ್ಕಳಿಗೆ ಮಾನವೀಯ ಮೌಲ್ಯಗಳನ್ನು, ಪ್ರಕೃತಿಯ ಚಿತ್ರಣವನ್ನು ಪರಿಚಯಿಸಿದ್ದಾರೆ.

ಮಕ್ಕಳ ಸಾಹಿತ್ಯದ ಮೂಲಕ ಮಕ್ಕಳ ಮನಸ್ಸು ಮತ್ತು ಬುದ್ಧಿಯನ್ನು ಚುರುಕುಗೊಳಿಸಿದ್ದಾರೆ. ಮಾನವೀಯ ಗುಣಗಳನ್ನು ರೂಪಿಸಿರುವುದರ ಜೊತೆಗೆ ಹಾಸ್ಯದ ಹೊನಲನ್ನೇ ಹರಿಸಿದ್ದಾರೆ. ಇದನ್ನು ನಾವು 'ಬೊಮ್ಮನ ಹಳ್ಳಿಯ ಕಿಂದರಿಜೋಗಿ' ಎಂಬ ಕವನದಲ್ಲಿ ಕಾಣಲಾಗಿದೆ.

ಮಕ್ಕಳ ಮನಸ್ಸನ್ನು ಅರಿತಿರುವ ಕವಿ ಕುವೆಂಪು ಸರಳವಾದ ಆಡುಭಾಷೆಯನ್ನೇ ಬಳಸಿ ಕವಿತೆ, ಕಥೆ, ನಾಟಕಗಳ ರೂಪದಲ್ಲಿ ರಚಿಸಿರುವುದರಿಂದ ಮಕ್ಕಳ ಮನಸ್ಸನ್ನು ಸೆಳೆದಿದೆ. ಏಕೆಂದರೆ, ಪದ್ಯದ ರೂಪದಲ್ಲಿರುವ ಕವನಗಳು, ಕಲ್ಪನೆಯಿಂದ ರಚಿತವಾಗಿರುವ ಕಥೆಗಳು ಹಾಗೂ ದೃಶ್ಯವಾಗಿ ಮೂಡಿಬಂದಿರುವ ನಾಟಕಗಳು ಮಕ್ಕಳನ್ನು ಆಕರ್ಷಿಸುವಲ್ಲಿ ಯಶಸ್ವಿಯಾಗಿದೆ.

ಕುವೆಂಪುರವರ ಮಕ್ಕಳ ಸಾಹಿತ್ಯದಲ್ಲಿ ಬಂದಿರುವ ಕವನಗಳೆಲ್ಲವೂ ಲಯ, ಪ್ರಾಸವನ್ನು ಒಳಗೊಂಡಂತೆ ಸುಲಲಿತವಾದ ಭಾಷೆಯನ್ನು ಬಳಸಿರುವುದರಿಂದ ಮಕ್ಕಳು ಅದನ್ನು ಸುಲಭವಾಗಿ ಅರ್ಥಮಾಡಿಕೊಳ್ಳಲು ಸಹಕಾರಿಯಾಗಿದೆ. ಇದರಿಂದ ಮಕ್ಕಳ ಮನಸ್ಸಿಗೆ ಉಲ್ಲಾಸ, ಉತ್ಸಾಹ ನೀಡುವ ಕಾವ್ಯ ಚಮತ್ಕಾರವನ್ನು ಕುವೆಂಪು ತಮ್ಮ ಸಾಹಿತ್ಯದಲ್ಲಿ ಪ್ರತಿಬಿಂಬಿಸಿದ್ದಾರೆ.

ಇಂತಹ ಸಾಹಿತ್ಯವನ್ನು ಕೊಡುಗೆಯಾಗಿ ನೀಡಿರುವ ಕುವೆಂಪುರವರು ಮಕ್ಕಳ ವ್ಯಕ್ತಿತ್ವವನ್ನು ರೂಪಿಸುವಂತಹ ಸಾತ್ವಿಕ ಗುಣಗಳಾದ 'ಪ್ರೀತಿ, ಪ್ರೇಮ, ಕರುಣೆ, ಭಕ್ತಿ, ಶ್ರದ್ಧೆ, ಔದಾರ್ಯ' ಹೀಗೆ ಇನ್ನೂ ಹಲವಾರು ಗುಣಗಳನ್ನು ಮಾನವೀಯ ಮೌಲ್ಯಗಳಾಗಿ ಮಕ್ಕಳಲ್ಲಿ ಅಳವಡಿಸುವ ಪ್ರಯತ್ನವನ್ನು ಈ ಸಾಹಿತ್ಯದಲ್ಲಿ ಮಾಡಿದ್ದಾರೆ.

ಇಷ್ಟೆಲ್ಲಾ ಅಲ್ಲದೆ ಕುವೆಂಪು ಅವರ ಮಕ್ಕಳ ಸಾಹಿತ್ಯದಲ್ಲಿ ಬರುವ ಪಾತ್ರಚಿತ್ರಣವಂತು ಅದ್ಭುತವಾಗಿದೆ. ಇಲ್ಲಿ ಮನುಷ್ಯನಿಗಿರುವಷ್ಟೇ ಪ್ರಾಮುಖ್ಯತೆಯನ್ನು ಕನಿಷ್ಠ ಪ್ರಾಣಿಗಳಿಗೂ ದೊರೆತಿರುವುದನ್ನು 'ಅಮಲನ ಕಥೆ'ಯಲ್ಲಿ ನೋಡಿದ್ದೇವೆ. ಹಾಗೂ ಅಮಲ–ಮಧುರನಿಗಿದ್ದ ದೇವರ ಮೇಲಿನ ಭಕ್ತಿ, ಶ್ರದ್ಧೆಯನ್ನು ತಿಳಿಸುವುದರ ಜೊತೆಗೆ ಕವಿಯು ಪ್ರೀತಿಸುವ ಪ್ರಕೃತಿಯ ಚಿತ್ರಣವನ್ನು ಈ ಕಥೆಯಲ್ಲಿ ಬಿಂಬಿಸಿದ್ದಾರೆ.

ಪ್ರಾಣಿ–ಪಕ್ಷಿಗಳಿಗೆ ಒಂದು ಸುಂದರವಾದ ಸಂಬಂಧವನ್ನು ಕಲ್ಪಿಸಿ ಆ ಪ್ರಾಣಿ–ಪಕ್ಷಿಗಳ ಮೂಲಕವೇ ಮಕ್ಕಳಿಗೆ ಅವಶ್ಯಕವಾಗಿರುವ ಮಾನವೀಯ ಗುಣಗಳಲ್ಲಿ ಒಂದಾಗಿರುವ 'ಕರುಣೆ, ಔದಾರ್ಯತೆ, ಸಹಾಯ ಮಾಡುವ ಮನಸ್ಸು' ಇವುಗಳೆಲ್ಲವನ್ನು ಕವಿ 'ನರಿಗಳಿಗೇಕೆ ಕೋಡಿಲ್ಲ' ಎಂಬ ಕಥೆಯ ಮೂಲಕ ತಿಳಿಸಿದ್ದಾರೆ. ನೋಡಲು ಪುಟ್ಟ ಕಥೆಯಂತಿರುವ ಈ ಕೃತಿಯಲ್ಲಿ ಪ್ರಾಣಿ–ಪಕ್ಷಿಗಳ ಮಾತುಕತೆ, ಅವುಗಳು ನಡೆದುಕೊಳ್ಳುವ ರೀತಿ, ಅವುಗಳಲ್ಲಿ ಇರುವಂತಹ ಒಳ್ಳೆಯ ಗುಣಗಳು, ಕೆಟ್ಟಗುಣಗಳು, ಮಾಡಿದಂತಹ ತಪ್ಪಿಗೆ ಸಿಗುವ ಶಿಕ್ಷೆ ಯಾವ ಬಗೆಯದ್ದಾಗಿರುತ್ತದೆ ಎಂಬ ಅಂಶಗಳನ್ನೆಲ್ಲಾ ಒಳಗೊಂಡಂತೆ ಈ ಕಥೆಯನ್ನು ಮಕ್ಕಳಿಗೆ ಪರಿಚಯಿಸಿದ್ದಾರೆ.

'ಹಾಳೂರು' ಕವನವು ಕುವೆಂಪು ಅವರ ಮಕ್ಕಳ ಸಾಹಿತ್ಯಕ್ಕೆ ಒಳಪಟ್ಟಿದ್ದರೂ ಕೂಡ ಈ ಕವನವು ಮಕ್ಕಳಿಗಿಂತ ಹೆಚ್ಚಾಗಿ ದೊಡ್ಡವರಿಗೆ ಅನ್ವಯಿಸುವಂತದ್ದಾಗಿದೆ. ಆದರೂ ಕೂಡ ಮಕ್ಕಳು ತಿಳಿದುಕೊಳ್ಳಬೇಕಾದ ಅನೇಕ ಅಂಶಗಳನ್ನು ಈ ಕವನದಲ್ಲಿ ಕಾಣಲಾಗಿದೆ. ಹಾಗೂ ಈ ಕವನದಲ್ಲಿ ಹಳ್ಳಿಯ ಚಿತ್ರಣ, ಹಳ್ಳಿಗಳು ಹಾಳಾಗುತ್ತಿರುವುದಕ್ಕೆ ಮುಖ್ಯವಾದ ಕಾರಣವೇನು? ಹಾಗೆಯೇ ಮುಂದೆ ಹಾಳಾಗದಂತೆ ವಹಿಸಬೇಕಾದ ಎಚ್ಚರಿಕೆಯನ್ನು ಕವಿಯು ಈ ಕವನದ ಸಾಲುಗಳ ಮೂಲಕ ತುಂಬಾ ಜಾಣ್ಮೆಯಿಂದ ಮಕ್ಕಳ ಮುಂದಿಟ್ಟಿದ್ದಾರೆ.

ಹಿರಿಯರು-ಕಿರಿಯರೆನ್ನದೆ ಪ್ರತಿಯೊಬ್ಬರಿಗೂ ಅಚ್ಚು-ಮೆಚ್ಚಾಗಿರುವ ಕುವೆಂಪು ಅವರ 'ಬೊಮ್ಮನ ಹಳ್ಳಿಯ ಕಿಂದರಿಜೋಗಿ' ಕವನದಲ್ಲಿ ಒಂದು ಹಳ್ಳಿಯು ಇಲಿಗಳ ಕಾಟದಿಂದ ಅನುಭವಿಸುವ ಕಷ್ಟವನ್ನು ಕವಿಯು ಹಾಸ್ಯದ ಮೂಲಕ ಪರಿಚಯಿಸುತ್ತಾ ಹೋಗಿದ್ದಾರೆ. ನಂತರದಲ್ಲಿ ಬರುವ ಜೋಗಿಯ ಆಗಮನ ಮಕ್ಕಳಲ್ಲಿ ಹೊಸ ಚೈತನ್ಯವನ್ನು ಮೂಡಿಸುವಂತಹ ದೃಶ್ಯವನ್ನು ಈ ಕೃತಿಯಲ್ಲಿ ಕಾಣಲಾಗಿದೆ.

ನಿಷ್ಕಲ್ಮಷವಾದ, ನಿರ್ಮಲ ಮನಸ್ಸಿಗೆ ದೇವರು ಒಲಿಯುತ್ತಾನೆ. ಅದರಲ್ಲೂ ಮುಗ್ಧ ಮನಸ್ಸಿನಿಂದ ಕೂಡಿರುವ ಮಕ್ಕಳಿಗಂತೂ ಬೇಗನೆ ಒಲಿಯುತ್ತಾನೆ. ಎಂಬುದನ್ನು 'ನನ್ನ ಗೋಪಾಲ' ನಾಟಕದಲ್ಲಿ ಕವಿಯು ಸೊಗಸಾಗಿ, ಕಣ್ಣಿಗೆ ಕಟ್ಟುವಂತಹ ದೃಶ್ಯವನ್ನು ನಮ್ಮ ಮುಂದೆ ಇಟ್ಟಿದ್ದಾರೆ. 'ಭಕ್ತಿಯ'ಯನ್ನು ಪ್ರಧಾನವಾಗಿಟ್ಟುಕೊಂಡು ರಚಿಸಿರುವ ಈ ನಾಟಕದಲ್ಲಿ ಕುವೆಂಪು ಇಡೀ ಕಾಡಿನ ಸೌಂದರ್ಯವನ್ನು ಪರಿಚಯಿಸಿದ್ದಾರೆ. ಹಾಗೆಯೇ ಇದರಲ್ಲಿ ಬರುವ ಬನದ ಗೋಪಾಲ- ಪುಟ್ಟಗೋಪಾಲನ ಪಾತ್ರಗಳಂತು ಮನಸ್ಸಿಗೆ ತೀರಾ ಹತ್ತಿರವೆಂಬಂತೆ ಭಾಸವಾಗುತ್ತದೆ.

ಪ್ರಕೃತಿಯ ಮಡಿಲಲ್ಲಿ ಹುಟ್ಟಿದ ಕುವೆಂಪು ಅವರು 'ಪ್ರಕೃತಿ'ಯನ್ನೇ ಪ್ರಧಾನವಾಗಿಟ್ಟುಕೊಂಡು ರಚಿಸಿರುವ ಕೃತಿಯೇ 'ಮೋಡಣ್ಣನ ತಮ್ಮ' ಎಂಬ ನಾಟಕ. ಇದರಲ್ಲಿ ಇಡೀ ಪಾತ್ರಗಳು ಮೋಡ ಮತ್ತು ಒಬ್ಬ ಪುಟ್ಟ ಬಾಲಕನ ಸಂಭಾಷಣೆಯನ್ನೇ ಕಾಣಬಹುದಾಗಿದೆ. ಪ್ರಕೃತಿಯ ಸೌಂದರ್ಯದಲ್ಲಿ ಒಂದಾಗಿರುವ ಮೋಡದ ಜೊತೆ ಮಾತಾಡುವ ರೀತಿಯಂತೆ ಕವಿಯು ತನ್ನ ಕಲ್ಪನೆಯ ಮೂಲಕ ನಮಗೆ ಪರಿಚಯಿಸಿರುವುದು ತುಂಬಾ ಸೊಗಸಾಗಿದೆ.

ಕುವೆಂಪು ಅವರ ಮಕ್ಕಳ ಸಾಹಿತ್ಯದಲ್ಲಿ ಬರುವ 'ಶಿಶು ಗೀತಾಂಜಲಿ' ಎಂಬ ಕೃತಿಯು ಮಕ್ಕಳಿಗೆಂದೇ ಮೀಸಲಾಗಿರುವ ಕವನಗಳನ್ನು ಇದರಲ್ಲಿ ರಚಿಸಿದ್ದಾರೆ. 'ನನ್ನ ಮನೆ, ಮರಿವಿಜ್ಞಾನಿ, ಮೇಘಪುರ' ಎಂಬ ಕವನಗಳಲ್ಲಿ ಮಕ್ಕಳ ಬುದ್ಧಿಶಕ್ತಿಯನ್ನು

ಚುರುಕುಗೊಳಿಸುವಂತೆ, ಅವರ ಚಿಂತನಾಶೀಲತೆಯನ್ನು ಬೆಳೆಸುವ ಅನೇಕ ಕವನಗಳನ್ನು ಕುವೆಂಪು ಈ ಕೃತಿಯಲ್ಲಿ ಚಿತ್ರಿಸಿದ್ದಾರೆ.

ಈ ಮೇಲೆ ತಿಳಿಸಿರುವ 'ಕಥೆ, ಕವನ, ನಾಟಕ'ಗಳನ್ನು ಕುವೆಂಪು ಅವರ ಮಕ್ಕಳ ಸಾಹಿತ್ಯವು ಒಳಗೊಂಡಿದೆ ಎಂಬುದನ್ನು ಪರಿಚಯಿಸುವುದರ ಜೊತೆಯಲ್ಲೇ ಕುವೆಂಪು ಅವರು ಮಕ್ಕಳ ಸಾಹಿತ್ಯವನ್ನು ರಚಿಸುವುದಷ್ಟೇ ಅಲ್ಲದೆ ಇತರ ಸಾಹಿತ್ಯಗಳಂತೆ ಈ ಸಾಹಿತ್ಯಕ್ಕೂ ನೀಡಿರುವಂತಹ ಪ್ರಾಮುಖ್ಯತೆಯನ್ನು ತಿಳಿಯಲಾಗಿದೆ.

ಮಕ್ಕಳ ಸಾಹಿತ್ಯವು ಮಕ್ಕಳ ಬೆಳವಣಿಗೆಗೆ ಅವಶ್ಯಕವಾಗಿರುವ ಸಾಹಿತ್ಯವಾಗಿದ್ದು, ಇಂತಹ ಸಾಹಿತ್ಯವನ್ನು ಮಕ್ಕಳಿಗೆ ಪರಿಚಯಿಸುವುದರಿಂದ ಅವರಲ್ಲಿ ಮಾನವೀಯ ಮೌಲ್ಯಗಳೆನ್ನುವ 'ಪ್ರೀತಿ, ಪ್ರೇಮ, ಕರುಣೆ, ಭಕ್ತಿ, ಶ್ರದ್ಧೆ' ಹೀಗೆ ಇನ್ನೂ ಅನೇಕ ಗುಣಗಳನ್ನು ಬೆಳೆಸಲು ಪ್ರಯತ್ನ ಪಟ್ಟಿದ್ದಾರೆ.

ನಿಸರ್ಗದ ಮಗುವಾಗಿ ಜನಿಸಿರುವ ಕುವೆಂಪು ಮಕ್ಕಳ ಸಾಹಿತ್ಯದಲ್ಲೂ ಕೂಡ ಪ್ರಕೃತಿಯನ್ನು, ಪ್ರಕೃತಿಯ ಸೌಂದರ್ಯವನ್ನು ಚಿತ್ರಿಸಿರುವುದನ್ನು ಕಂಡಿದ್ದೇವೆ. ಹಾಗೆಯೇ ಕವಿಗಿರುವ ಪ್ರಕೃತಿಯ ಮೇಲಿನ ಪ್ರೀತಿಯು ಎಷ್ಟು ಆಳವಾಗಿದೆ ಎಂಬುದನ್ನು ಅಂದಾಜಿಸಲಾಗಿದೆ. ಅಂತಹ ನಿಸರ್ಗ ಪ್ರೀತಿಯನ್ನು ತಮ್ಮ ಕಥೆ, ಕವನ, ನಾಟಕಗಳ ಮೂಲಕವೇ ಮಕ್ಕಳಲ್ಲೂ ಅಳವಡಿಸಲು ಮುಂದಾಗಿರುವುದನ್ನು ತಿಳಿದುಕೊಂಡಿದ್ದೇವೆ. ಅದರಲ್ಲೂ ಮುಖ್ಯವಾಗಿ ಪ್ರಕೃತಿಗೂ ಮನುಷ್ಯನಿಗಿರುವ ಸಂಬಂಧವನ್ನು ಕೂಡ ಅವರ ಸಾಹಿತ್ಯ ಪ್ರಕಾರಗಳಲ್ಲಿ ಗಮನಿಸಲಾಗಿದೆ.

ಕುವೆಂಪು ಅವರ ಮಕ್ಕಳ ಸಾಹಿತ್ಯ ಪ್ರಕಾರಗಳಾದ ಕಥೆ, ಕವನ, ನಾಟಕ, ಇವುಗಳಲ್ಲಿ ಯಾವುದೇ ಆಗಿರಲಿ ಪ್ರತಿಯೊಂದೂ ಕೂಡ ತುಂಬಾ ಸರಳವಾಗಿ ರಚಿಸಿದ್ದಾರೆ. ಕನ್ನಡ ಭಾಷೆಯನ್ನು ಬಳಸಿಕೊಂಡು ಮಕ್ಕಳ ಮನಸ್ಸಿಗೆ ನಾಟುವಂತಹ, ಆಸಕ್ತಿ ಮುಡಿಸುವಂತಹ ಕನ್ನಡ ಪದಗಳನ್ನು ಪರಿಚಯಿಸಿ ಅರ್ಥಮಾಡಿಸಿದ್ದಾರೆ. ಹಾಗೆಯೇ ಮನೆಗಳಲ್ಲಿ ಆಡುವಂತಹ ಆಡುಭಾಷೆಯನ್ನೇ ಬಳಸಿರುವುದರಿಂದ ಮಕ್ಕಳಿಗೆ ಅರ್ಥವಾಗದೇ ಇರುವಂತಹ ಪದಗಳನ್ನು ಕೂಡ ಸುಲಭವಾಗಿ ಅರ್ಥೈಸಿದ್ದಾರೆ.

ಹೀಗೆ ಪಂಜೆ ಮಂಗೇಶರಾಯರು, ಶಿವರಾಮಕಾರಂತರು ಇನ್ನೂ ಅನೇಕರು ಕನ್ನಡದಲ್ಲಿ 'ಮಕ್ಕಳ ಸಾಹಿತ್ಯವನ್ನು ರಚಿಸುವುದರೊಂದಿಗೆ ಕನ್ನಡ ಸಾಹಿತ್ಯಕ್ಕೆ ಉಡುಗೊರೆಯಾಗಿ ನೀಡಿದರು. ಇಂತಹ ಮಹಾನ್ ವ್ಯಕ್ತಿಗಳಿಂದ ರಚನೆಗೊಂಡ ಮಕ್ಕಳ ಸಾಹಿತ್ಯವನ್ನು ಬೆಳೆಸಿ, ಯಶಸ್ವಿಯಾಗಿ ಮುನ್ನೆಡಿಸಿಕೊಂಡು ಬಂದವರೇ ನಮ್ಮ ರಾಷ್ಟ್ರಕವಿ ಕುವೆಂಪು.

ಇಂತಹ ಸಾಹಿತ್ಯವನ್ನು ಕುವೆಂಪು ತುಂಬಾ ಅಚ್ಚುಕಟ್ಟಾಗಿ ಅತೀ ಜಾಣ್ಮೆಯಿಂದ ರಚಿಸಿ ಮಕ್ಕಳ ಮನಸ್ಸನ್ನು ಆಕರ್ಷಿಸುವಲ್ಲಿ ಯಶಸ್ವಿಯಾಗಿದ್ದಾರೆ. ಆದರೆ, ಎಲ್ಲೋ ಒಂದು ಕಡೆ ಇತ್ತೀಚಿನ ದಿನಗಳಲ್ಲಿ ಮಕ್ಕಳ ಸಾಹಿತ್ಯದ ರಚನೆಯು ಅಷ್ಟಾಗಿ ಕಂಡುಬರುತ್ತಿಲ್ಲವೆಂಬುದೆ ಬೇಸರದ ವಿಷಯವಾಗಿದೆ. ಈ ಬಗೆಯ ಸಾಹಿತ್ಯ ಕುಂಠಿತ ಆಗಿರುವುದಕ್ಕೆ ಅನೇಕ ಕಾರಣಗಳು, ಸಮಸ್ಯೆಗಳಿರಬಹುದು. ಅಂತಹದ್ದೇನೆ ಸಮಸ್ಯೆಗಳಿದ್ದರು ಅದನ್ನು ಪರಿಹರಿಸಿ ಮುನ್ನೆಡೆಸುವ ಶಕ್ತಿ ನಮ್ಮ ಕೈಲಿದೆ.

ಅಲ್ಪಪ್ರಮಾಣದಲ್ಲಿ ಮಕ್ಕಳ ಸಾಹಿತ್ಯವನ್ನು ಕುರಿತಂತೆ ಅನೇಕ ಲೇಖನಗಳು, ಪ್ರಬಂಧಗಳು ಪ್ರಕಟಗೊಂಡಿದ್ದರೂ ಕೂಡ ಇನ್ನೂ ಹೆಚ್ಚಿನ ಮಟ್ಟದಲ್ಲಿ ಇಂತಹ ಸಾಹಿತ್ಯಗಳು ಹೊರಬರುವ ಅಗತ್ಯವಿದೆ. ಏಕೆಂದರೆ ಈ ಬಗೆಯ ಸಾಹಿತ್ಯವು ಮಕ್ಕಳಿಗೆ ದೊರೆಯುವುದರಿಂದ ಮಕ್ಕಳ ದೃಷ್ಟಿಕೋನ ಬದಲಾಗಿ ಅವರ ಬೆಳವಣಿಗೆಗೆ ಉತ್ತಮಮೌಲ್ಯಗಳನ್ನು ಒದಗಿಸಲು ಸಹಕಾರಿಯಾಗುತ್ತದೆ.

ಸಮಾಜದ ಪ್ರತಿಯೊಬ್ಬ ಸಾಹಿತ್ಯ ಚಿಂತಕರು, ಸಂಶೋಧಕರು ಇಂತಹ ಸಾಹಿತ್ಯವನ್ನು ಶೋಧಿಸಿ ಉನ್ನತಮಟ್ಟದ ಅಧ್ಯಯನ ನಡೆಸಬೇಕಾದ ಅಗತ್ಯವಿದೆ. ಮಕ್ಕಳನ್ನೇ ಕೇಂದ್ರವಾಗಿಟ್ಟುಕೊಂಡು ರಚಿಸುವ ಮಕ್ಕಳ ಸಾಹಿತ್ಯವು ಮಕ್ಕಳ ಬೆಳವಣಿಗೆಗೆ, ಅವರ ಅಭಿವೃದ್ಧಿಗೆ ಅನುಕೂಲವನ್ನುಂಟು ಮಾಡಬೇಕು.

ಹೀಗೆ, ಒಟ್ಟಾರೆಯಾಗಿ ಮಕ್ಕಳ ಸಾಹಿತ್ಯದಿಂದ ಮಕ್ಕಳಿಗಾಗುವ ಉಪಯೋಗವನ್ನು ಅದರ ಅಗತ್ಯತೆಯನ್ನು ಮಕ್ಕಳಿಗೆ ಮನವರಿಕೆ ಮಾಡಬೇಕು. ಮಕ್ಕಳ ಸಾಹಿತ್ಯದ ಬಗ್ಗೆ ಹೆಚ್ಚು ಹೆಚ್ಚು ಸಂಶೋಧನೆಗಳನ್ನು ಕೈಗೊಳ್ಳಬೇಕು. ಮಕ್ಕಳ ಸಾಹಿತ್ಯವನ್ನೇ ಮಕ್ಕಳ ಪಠ್ಯವಾಗಿ ಸೇರಿಸಿ ಅದನ್ನು ಪ್ರಕಟಿಸುವ ಮೂಲಕ ಈ ಸಾಹಿತ್ಯದ ಮಹತ್ವವನ್ನು ತಿಳಿಯುವಂತೆ ಮಾಡಬೇಕು. ಉನ್ನತ ಮಟ್ಟದ ವ್ಯಾಸಂಗದಲ್ಲಿ ಇಂತಹ ಸಾಹಿತ್ಯವನ್ನು ಅಧ್ಯಯನ ಮಾಡುವುದರ ಮೂಲಕ ಮಕ್ಕಳ ಸಾಹಿತ್ಯವನ್ನು ಅಭಿವೃದ್ಧಿಯ ಪಥದತ್ತ ಕೊಂಡೊಯ್ಯಲು ಸಾಧ್ಯವಾಗುತ್ತದೆ ಎಂಬ ಹಲವು ಅಭಿಪ್ರಾಯದೊಂದಿಗೆ ಕುವೆಂಪು ಅವರು ಬೆಳೆಸಿರುವ ಈ ಸಾಹಿತ್ಯವನ್ನು ಇಂದಿನ ರಚನಾಕಾರರು, ಸಂಶೋಧಕರು ಆಸಕ್ತಿವಹಿಸಿ ಮುನ್ನಡೆಸಬೇಕೆಂಬುದೇ ಈ ನಿಬಂಧದ ಆಶಯವಾಗಿದೆ.

# ಗ್ರಂಥಋಣ

## ೧. ಆಕರ ಗ್ರಂಥಗಳು

೧. ಕುವೆಂಪು : *ಅಮಲನ ಕಥೆ*
ಉದಯರವಿ ಪ್ರಕಾಶನ
ವಾಣಿವಿಲಾಸಪುರಂ
ಮೈಸೂರು, ೧೯೨೪

: *ಬೊಮ್ಮನಹಳ್ಳಿಯ ಕಿಂದರಿಜೋಗಿ*
ಉದಯರವಿ ಪ್ರಕಾಶನ
ವಾಣಿವಿಲಾಸಪುರಂ
ಮೈಸೂರು, ೧೯೨೬

: *ನರಿಗಳಿಗೇಕೆ ಕೋಡಿಲ್ಲ*
ಉದಯರವಿ ಪ್ರಕಾಶನ
ವಾಣಿವಿಲಾಸಪುರಂ
ಮೈಸೂರು, ೧೯೭೭

: *ಹಾಳೂರು*
ಉದಯರವಿ ಪ್ರಕಾಶನ
ವಾಣಿವಿಲಾಸಪುರಂ
ಮೈಸೂರು, ೧೯೨೬

: *ನನ್ನ ಮನೆ*
ಉದಯರವಿ ಪ್ರಕಾಶನ
ವಾಣಿವಿಲಾಸಪುರಂ
ಮೈಸೂರು, ೧೯೪೭

: *ಮೇಘಪುರ*
ಉದಯರವಿ ಪ್ರಕಾಶನ
ವಾಣಿವಿಲಾಸಪುರಂ
ಮೈಸೂರು, ೧೯೪೭

: *ಮರಿವಿಜ್ಞಾನಿ*
ಉದಯರವಿ ಪ್ರಕಾಶನ
ವಾಣಿವಿಲಾಸಪುರಂ
ಮೈಸೂರು, ೧೯೪೭

: *ನನ್ನ ಗೋಪಾಲ*
ಉದಯರವಿ ಪ್ರಕಾಶನ
ವಾಣಿವಿಲಾಸಪುರಂ
ಮೈಸೂರು, ೧೯೩೦

: *ಮೋಡಣ್ಣನ ತಮ್ಮ*
ಉದಯರವಿ ಪ್ರಕಾಶನ
ವಾಣಿವಿಲಾಸಪುರಂ
ಮೈಸೂರು, ೧೯೨೬

೨. ಪರಾಮರ್ಶನ ಗ್ರಂಥಗಳು:

೧. ದೇ.ಜ.ಗೌ : *ಕುವೆಂಪು ದರ್ಶನ, ಸಂಪುಟ-೨*
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ೨೦೦೭
ವಿದ್ಯಾರಣ್ಯ ೫೮೩ ೨೭೬

*ಮಹಾಕವಿ ಕುವೆಂಪು ದರ್ಶನ, ಸಂಪುಟ-೨*
ಪ್ರಸಾರಾಂಗ, ಕರ್ನಾಟಕ ರಾಜ್ಯ ಮುಕ್ತ
ವಿಶ್ವವಿದ್ಯಾನಿಲಯ, ೨೦೧೦
ಮೈಸೂರು

*ಕುವೆಂಪು ಸಾಹಿತ್ಯ ಕೆಲವು ಅಧ್ಯಯನಗಳು ೩, ೪*
ಸಹ್ಯಾದ್ರಿ ಪ್ರಕಾಶನ
ಶ್ರೀ ಕುವೆಂಪು ವಿದ್ಯಾಪರಿಷತ್ತು, ಕವಿಶೈಲ
ಜಯಲಕ್ಷ್ಮೀಪುರಂ
ಮೈಸೂರು

*ಕುವೆಂಪು ಶೈಲಿ*
ಸಹ್ಯಾದ್ರಿ ಪ್ರಕಾಶನ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್,
೧೯೯೧, ಮೈಸೂರು

೨. ದೇಜಗೌ
ಡಾ॥ ಜಿ.ಎಸ್.ಶಿವರುದ್ರಪ್ಪ
ಡಾ. ಪ್ರಧಾನ್ ಗುರುದತ್ತ
: *ಕುವೆಂಪು ಸಂಚಯ – ೨೦೦೯*
ಕುವೆಂಪು ಭಾಷಾ ಭಾರತಿ ಪ್ರಾಧಿಕಾರ
ಕಲಾಗ್ರಾಮ, ಮಲ್ಲತ್ತಹಳ್ಳಿ
ಜ್ಞಾನಭಾರತಿ ಹಿಂಭಾಗ, ಬೆಂಗಳೂರು

೩. ಕುವೆಂಪು : *ನೆನಪಿನ ದೋಣಿಯಲ್ಲಿ -೧, ೨*
ಸಹ್ಯಾದ್ರಿ ಪ್ರಕಾಶನ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
೧೯೮೦, ೧೯೮೫
ಮೈಸೂರು

: *ಸಾಹಿತ್ಯ ಪ್ರಚಾರ*
ಉದಯರವಿ ಪ್ರಕಾಶನ
ವಾಣಿವಿಲಾಸಪುರಂ
ಮೈಸೂರು, ೧೯೨೪

೪. ಪಂಜೆ ರಾಮರಾಯ(ಸಂ.) : *ಪಂಜೆಯವರ ಕೃತಿಗಳು, ಪ್ರಬಂಧಗಳು ಮತ್ತು ಸಂಶೋಧನೆ, ಸಂಪುಟ-೪*
ಓರಿಯಂಟ್ ಲಾಂಗ್‌ಮನ್ ಲಿಮಿಟೆಡ್
೧೯೭೩.

೫. ಶಿವಾರೆಡ್ಡಿ ಕೆ.ಸಿ.(ಸಂ.) : *ಕುವೆಂಪು ಸಮಗ್ರ ಕಾವ್ಯ ಸಂಪುಟ ೧, ೨*
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ೨೦೦೭
ವಿದ್ಯಾರಣ್ಯ ೫೮೩ ೨೭೬

: *ಕುವೆಂಪು ಸಮಗ್ರ ನಾಟಕ*
ಸಹ್ಯಾದ್ರಿ ಪ್ರಕಾಶನ, ೧೯೯೦
ಜಯಲಕ್ಷ್ಮೀಪುರಂ
ಮೈಸೂರು

೭. ಎಂ.ಸಿ.ವಸಂತ್‌ಕುಮಾರ್ : *ಕುವೆಂಪು ನಾಟಕ ಸಮೀಕ್ಷೆ*
ಸುರುಚಿ ಪ್ರಕಾಶನ, ಮೈಸೂರು

೮. ಡಾ. ಬೈರಮಂಗಲ ರಾಮೇಗೌಡ : *ರಸಸಿದ್ಧಿ, ಕುವೆಂಪು ಕಾವ್ಯ ವಿಮರ್ಶೆ ಸಮಾನ ಮನಸ್ಕರ ಒಕ್ಕೂಟ, ೨೦೦೩*
ಬೆಂಗಳೂರು.

೯. ಎನ್.ಬೋರಲಿಂಗಯ್ಯ : *ಕನ್ನಡ ಸಾಹಿತ್ಯ ಸಂದರ್ಭ ಮತ್ತು ಕುವೆಂಪು*
ದಾರಿದೀಪ ಪ್ರಕಾಶನ, ೨೦೦೫
ದಾರಿದೀಪ ಸಂಶೋಧನಾ ಕೇಂದ್ರ
೧೧೪, ಬೋಗಾಧಿ ಬಡಾವಣೆ
(ದಕ್ಷಿಣ), ಮೈಸೂರು

೧೦. ಮು.ಶಿವನಂಜಯ್ಯ : *ಕುವೆಂಪು ವ್ಯಕ್ತಿತ್ವ ಮತ್ತು ಸಾಹಿತ್ಯ, ೧೯೭೫*
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

೧೧. ಡಾ. ಡಿ.ಕೆ.ರಾಜೇಂದ್ರ : *ಕುವೆಂಪು ಸಾಹಿತ್ಯಾವಲೋಕನ*
ಸಹ್ಯಾದ್ರಿ ಪ್ರಕಾಶನ, ೧೯೮೫
ಶ್ರೀ ಕುವೆಂಪು ವಿದ್ಯಾಪರಿಷತ್ತು
ಕವಿಶೈಲ, ಜಯಲಕ್ಷ್ಮೀಪುರಂ
ಮೈಸೂರು

